## ಶ್ರೀ ವಿರೂಪಾಕ್ಷ ಬಡಿಗೇರ ಸಂಕ್ಷಿಪ್ತ ಪರಿಚಯ

ಬಾದಾಮಿ ಚಾಲುಕ್ಯರ ಐಹೊಳೆಯಲ್ಲಿ ಬೆಳೆದು ಆ ನಾಡಿನ ಮಣ್ಣಿನ ಸತ್ವವನ್ನು ಸಾಹಿತ್ಯ ಕ್ಷೇತ್ರದಲ್ಲಿ ಪ್ರತಿಬಿಂಬಿಸುತ್ತಿರುವ ವಿರೂಪಾಕ್ಷ ಬಡಿಗೇರ (1-6-1947)ಸಧ್ಯ ಮಂಗಳೂರು ಆಕಾಶವಾಣಿಯಲ್ಲಿ ಬಾನುಲಿ ಕೃಷಿ ಅಧಿಕಾರಿಯಾಗಿದ್ದಾರೆ. ಬಾಲ್ಯದಿಂದಲೇ ಸಾಹಿತ್ಯದ ಗೀಳನ್ನು ಹೊಂದಿಕೊಂಡಿರುವ ಅವರು ೧೯೮೦ ರಿಂದ ಈ ವರೆಗೆ ಇಪ್ಪತ್ತು ಕೃತಿಗಳನ್ನು ಕಾವ್ಯ, ನಾಟಕ, ವ್ಯಕ್ತಿ ಪರಿಚಯ, ಶಿಲ್ಪಕ್ಷೇತ್ರ, ಕೃಷಿ ಹಾಗೂ ಮನೋವಿಜ್ಞಾನ ಮುಂತಾದ ಕ್ಷೇತ್ರ ಕುರಿತು ಬರೆದು ಪ್ರಕಟಿಸಿದ್ದಾರೆ. ಸಾಹಿತ್ಯ ಹಾಗೂ ಪ್ರಸಾರ ಮಾಧ್ಯಮದಲ್ಲಿ ಚಿರಪರಿಚಿತರಾದ ವಿರೂಪಾಕ್ಷ ಬಡಿಗೇರ ಅವರಿಗೆ ರಾಜ್ಯಮಟ್ಟದಲ್ಲಿ ಕಾವ್ಯ, ನಾಟಕ, ಪ್ರಬಂಧ ಹಾಗೂ ಕೃಷಿ ವಿಜ್ಞಾನ ಕೃತಿಗಳಿಗೆ ಬಹುಮಾನಗಳೂ ಬಂದಿವೆ. ನಾಡಿನ ಹಲವಾರು ಸಾಹಿತ್ಯ ಮತ್ತು ಸಾಂಸ್ಕೃತಿಕ ಸಮ್ಮೇಳನದ ಗೋಷ್ಠಿಗಳಲ್ಲಿ ಪಾಲ್ಗೊಂಡಿರುವುದು ಅವರ ವೈವಿಧ್ಯ ವ್ಯಕ್ತಿತ್ವದ ಪ್ರತೀಕ.

ಪ್ರಸ್ತುತ ಶಿಲ್ಪಿ ಗುಂಡಪ್ಪನವರ ಹತ್ತಿರದ ಒಡನಾಡಿಯಾಗಿರುವ ವಿರೂಪಾಕ್ಷ ಬಡಿಗೇರ ಅವರಿಂದ ಈಗಾಗಲೇ ಮೂರು ಕೃತಿಗಳು ಶಿಲ್ಪಿಯವರ ಜೀವನ ಹಾಗೂ ಕಲೆ ಕುರಿತು ಪ್ರಕಟಗೊಂಡಿವೆ. ಮೈಸೂರು ವಿಶ್ವವಿದ್ಯಾಲಯದ ಸ್ನಾತಕೋತ್ತರ ಪದವಿ ಹಾಗೂ ಪತ್ರಿಕೋದ್ಯಮ ಡಿಪ್ಲೋಮಾ ಪಡೆದ ಬಡಿಗೇರರ ಹಲವಾರು ಲೇಖನಗಳು ನಾಡಿನ ನಿಯತಕಾಲಿಕೆಗಳಲ್ಲಿ ಪ್ರಕಟಗೊಂಡಿವೆ.

ಇತ್ತೀಚಿನ ದಿನಗಳಲ್ಲಿ ಚಾಲುಕ್ಯನಾಡಿನ ಐಹೊಳೆ ಬಾದಾಮಿ ಪಟ್ಟದಕಲ್ಲುಗಳ ವಾಸ್ತು ಶಿಲ್ಪ ವೈಭವ ಕುರಿತು ಇನ್ನೂ ಹಲವಾರು ಕನಸುಗಳನ್ನು ಕಟ್ಟಿಕೊಂಡಿರುವ ಅವರಿಂದ ಶಿಲ್ಪ ಹಾಗೂ ಶಿಲ್ಪಿಗಳ ಕುರಿತು ಗ್ರಂಥಗಳೂ ಮೂಡಿಬರಲಿವೆ.

ಶಿಲ್ಪಕಲಾವಿದರ ಮಾಲೆ : ೪

# ವರಶಿಲ್ಪಿ ಗುಂಡಪ್ಪ ಮಯಾಚಾರ್ಯ

ವಿರೂಪಾಕ್ಷ ಬಡಿಗೇರ



ಕರ್ನಾಟಕ ಶಿಲ್ಪಕಲಾ ಅಕಾಡೆಮಿ
ಕನ್ನಡ ಭವನ, ಮೇಲ್ಮನೆ
ಜೆ.ಸಿ. ರಸ್ತೆ, ಬೆಂಗಳೂರು - ೫೬೦ ೦೦೨

*VARASHILPI GUNDAPPA MAYACHARYA*
*A Monograph by* ***Virupaksha Badigera***
*Published by N. Marishamachar, Registrar*
KARNATAKA SHILPAKALA ACADEMY
*1st Floor, Kannada Bhavana*
*J.C. Road Bangalore - 560 002*

ಮೊದಲ ಮುದ್ರಣ - 2000

ಪ್ರತಿಗಳು : 1000

ಸಂಪಾದಕ
ಎನ್. ಮರಿಶಾಮಾಚಾರ್

ಬೆಲೆ : ರೂ 15=00

ಮುದ್ರಕರು
ಸ್ಕ್ಯಾನ್ ಡಾಟ್
ಬೆಂಗಳೂರು
☎ 2093642, 6800659

# ಮೊದಲ ಮಾತು

ನಮ್ಮ ರಾಜ್ಯ ಶಿಲ್ಪಕಲೆಗೆ ವಿಶ್ವದಲ್ಲೇ ಹೆಸರು ಪಡೆದಿದ್ದು, 'ಶಿಲ್ಪಕಲೆಯ ತವರೂರು' ಎಂದು ಕರೆಯಲ್ಪಟ್ಟಿದೆ. ಈ ನಾಡಿನಲ್ಲಿ ಅನೇಕ ಶಿಲ್ಪ ಶೈಲಿಗಳು ಹುಟ್ಟಿ, ಅವು ತಮ್ಮದೇ ಆದ ವಿಶಿಷ್ಟ ಸ್ಥಾನವನ್ನು ಪಡೆದಿವೆ. ನಮ್ಮ ರಾಜ್ಯದಲ್ಲಿ ಶಿಲ್ಪಕಲೆಗಾಗಿ ದುಡಿದವರು ಹಲವಾರು ಶಿಲ್ಪಿಗಳು. ಕೆಲವು ಶಿಲ್ಪಿಗಳು 'ಶಿಲ್ಪ ರಚಿಸುವುದೇ ತಮ್ಮ ಕಾಯಕ'ವೆಂದು ತಿಳಿದು, ಶಿಲ್ಪದ ಮೇಲೆ ತಮ್ಮ ಹೆಸರುಗಳನ್ನು ನಮೂದಿಸಿರುವುದಿಲ್ಲ. ಸಾಂಪ್ರದಾಯಿಕವಾಗಿ ಶಿಲ್ಪಕಲೆ ಬೆಳೆದು ಬಂದಿದ್ದು ಇಂದಿಗೂ ಈ ಕಲೆಗಳನ್ನು ಉಳಿಸಿ, ಬೆಳೆಸಿಕೊಂಡು ಬಂದಿರುವವರು ನಮ್ಮಲ್ಲಿದ್ದಾರೆ. ಶಿಲ್ಪಕಲಾ ಅಕಾಡೆಮಿ ಇಂತಹ ಹಿರಿಯ ಶಿಲ್ಪಕಲಾವಿದರು ಮತ್ತು ಅವರ ಕೃತಿಗಳ ಬಗ್ಗೆ ಪುಸ್ತಕಗಳನ್ನು ಪ್ರಕಟಿಸುವ ಯೋಜನೆಯನ್ನು ಪ್ರಾರಂಭಿಸಿದೆ. ಈ ಪುಸ್ತಕಗಳು ಈ ಶಿಲ್ಪಿಗಳ ಮತ್ತು ಕೃತಿಗಳ ಪರಿಚಯ ಮಾಡಿಸುವುದರ ಜೊತೆಗೆ ರಾಜ್ಯದಲ್ಲಿ ಶಿಲ್ಪಕಲೆ ಬೆಳೆದು ಬಂದ ದಾರಿ ಮತ್ತು ಅದರ ಚರಿತ್ರೆಯನ್ನು ತಿಳಿಯಲು ಸಹಾಯಕವಾಗುವುದು.

ಈ ಯೋಜನೆಯಲ್ಲಿ ನಮ್ಮ ನಾಡಿನ ಹೆಸರಾಂತ ಶಿಲ್ಪಿಗಳಾದ ಶ್ರೀ ಗುಂಡಪ್ಪ ಮಯಾಚಾರ್ಯರ ಬಗ್ಗೆ ಶ್ರೀ ವಿರೂಪಾಕ್ಷ ಬಡಿಗೇರ ಅವರು ಪುಸ್ತಕವನ್ನು ಬರೆದು ಕೊಟ್ಟಿದ್ದಾರೆ. ಶ್ರೀಯುತರು ಅವರ ಶಿಷ್ಯರಾಗಿ, ಅವರ ಬಗ್ಗೆ ಚೆನ್ನಾಗಿ ಅರಿತಿದ್ದು, ಅವರ ಜೀವನ ಮತ್ತು ಕೃತಿಗಳ ಬಗ್ಗೆ ವಿವರವಾಗಿ ಬರೆದಿದ್ದಾರೆ. ಶ್ರೀಯುತರಿಗೆ ಅಕಾಡೆಮಿಯ ಪರವಾಗಿ ವಂದನೆಗಳನ್ನು ಸಲ್ಲಿಸುವೆ.

ನಮ್ಮ ನಾಡಿನ ಜನರು ಅಕಾಡೆಮಿಯ ಈ ಸಾಧನೆಯನ್ನು ಸ್ವಾಗತಿಸುವರೆಂದು ಆಶಿಸುತ್ತೇನೆ.

ಬೆಂಗಳೂರು

ಸಿ. ಪರಮೇಶ್ವರಾಚಾರ್
ಅಧ್ಯಕ್ಷರು, ಕರ್ನಾಟಕ ಶಿಲ್ಪಕಲಾ ಅಕಾಡೆಮಿ

## 'ಶ್ರೀ ಕಾಳಿಕಾ ಧ್ಯಾನಮ್'

ಓಂ ಕಾಲಿಕಾ ಕಾಲಿಮಾತಾ ಚ ಕಾಲಾನಲ ಸಮದ್ಯುತಿಃ
ಕಪರ್ಧಿನಿ ಕರಾಲಾಸ್ಯಾ ಕರುಣಾಮೃತ ಸಾಗರಾ||
ಕೃಪಾಮಯಿ ಕೃಪಾಧಾರಾ ಕೃಪಾಪಾರಾ ಕೃಪಾಗಮಾ
ಕೃಷಾನು ಕಪಿಲಾ ಕೃಷ್ಣಾ ಕೃಷ್ಣಾನಂದ ವಿವರ್ಧಿನಿ||
ಕಾಲಶಕ್ತಿಃ ಕಾಮರೂಪಾ ಕಾಮಪಾಶ ವಿಮೋಚಿನಿ
ಕಾದಂಬಿನಿ ಕಲಾಧಾರಾ ಕಲಿ ಕಲ್ಮಶನಾಶಿನಿ||
ಕುಮಾರಿ ಪೂಜನ ಪ್ರೀತಾ ಕುಮಾರಿ ಪೂಜ ಕಾಲಾಯ
ಕುಮಾರಿ ಭೋಜನಾನಂದಾ ಕುಮಾರಿ ರೂಪಧಾರಿಣಿ||
ಕಪಾಲ ಪಾತ್ರ ನಿರತಾ ಕಂಕಾಲ ಮಾಲ್ಯಧಾರಿಣಿ
ಕಮಲಾಸನ ಸಂತುಷ್ಟಾ ಕಮಲಾಸನ ವಾಸಿನಿ ||
ಕಮಲಾಲಯ ಮಧ್ಯಸ್ಥಾ ಕಮಲಾಮೋದ ಮೋದಿನಿ
ಕಲ ಹಂಸಗತಿಃ ಕ್ಲೈಬ್ಯ ನಾಶಿನಿ ಕಾಮರೂಪಿಣಿ||
ಕಾಮರೂಪ ಕೃತಾವಾಸಾ ಕಾಮಪೀಠ ವಿಲಾಸಿನಿ
ಕಮನೀಯಾ ಕಲ್ಪಕತಾ ಕಮನೀಯ ವಿಭೂಷಣಾ||
ಕಮನೀಯಾ ಗುಣಾರಾಧ್ಯಃ ಕೋಮಲಾಂಗಿ ಕೃಶೋಧರಿ
ಕರುಣಾಮೃತ ಸಂತೋಷ ಕಾರಣಾನಂದ ಸಿದ್ಧಿದಾ||

'ಸ್ತೋತ್ರಮಾಲಿಕಾ' ಕೃಪೆ

# ವರಶಿಲ್ಪಿ ಗುಂಡಪ್ಪ ಮಯಾಚಾರ್ಯ

ಉತ್ತರ ಕರ್ನಾಟಕ ವಾಸ್ತುಶಿಲ್ಪಗಳ ಆಗರ. ಚಾಲುಕ್ಯ ಅರಸರು ಕೆತ್ತಿ ನಿಲ್ಲಿಸಿದ ಅಮರ ಸ್ಮಾರಕಗಳು ನಮ್ಮ ಸ್ಮೃತಿಪಟಲದಲ್ಲಿ ಬರುತ್ತವೆ. ಐಹೊಳೆ, ಬಾದಾಮಿ, ಪಟ್ಟದಕಲ್ಲುಗಳಲ್ಲಿಯ ಸುಂದರ ಶಿಲ್ಪ ಸ್ಮಾರಕಗಳು, ಅಲ್ಲಿ ಕೆತ್ತಿ ಅಭಿವ್ಯಕ್ತ ಪಡಿಸಿರುವ ಮೂರ್ತಿಗಳ ಶಿಲ್ಪ ವೈಭವ ನಮ್ಮ ಬಗೆಗಣ್ಣಿನೆದುರಿಗೆ ಸುಳಿಯುತ್ತವೆ. ಸಾವಿರಾರು ವರ್ಷಗಳ ಐತಿಹಾಸಿಕ ಸಂಸ್ಕೃತಿ ಪರಂಪರೆಗಳನ್ನು ಮೆರೆಸುತ್ತಿರುವ ಈ ದೇವಾಲಯಗಳು ಮಳೆ, ಗಾಳಿ, ಚಳಿಗಳಿಗೆ ಮೈಯೊಡ್ಡಿ ನಿಂತು ಇಂದಿಗೂ ನಮ್ಮ ಗತವೈಭವಗಳನ್ನು ಸಾರುತ್ತಿವೆ. ನಮ್ಮ ಮನಸ್ಸಿಗೆ ಮೂಡುತ್ತಿರುವ ಈ ಭಾಗದ ನೂರಾರು ಶಿಲ್ಪ ಸ್ಮಾರಕಗಳನ್ನು ನಿರ್ಮಿಸಿದ ಶಿಲ್ಪಕಲಾವಿದರು ಎಂದೆಂದಿಗೂ ಅಮರರೆನಿಸಿದ್ದಾರೆ. ಇಂಥ ಪರಿಸರದಲ್ಲಿರುವ ಜಿಲ್ಲಾ ಕೇಂದ್ರವಾದ ಬಾಗಲಕೋಟೆಯು ಸಾಹಿತ್ಯ ಹಾಗೂ ಸಾಂಸ್ಕೃತಿಕ ಕ್ಷೇತ್ರಕ್ಕೆ ಇಡೀ ನಾಡಿಗಷ್ಟೇ ಅಲ್ಲ ದೇಶ ವಿದೇಶಗಳ ಕಲಾಸಕ್ತರಿಗೆ ಮೆಚ್ಚಿನ ಸ್ಥಳವಾಗಿದೆ, ಜತೆಗೆ ಕಲಾಕ್ಷೇತ್ರದಲ್ಲಿಯೂ ಹೆಸರನ್ನು ಪಡೆದಿದೆ. ಈ ಬಾಗಲಕೋಟೆಯ ಭಾಗ್ಯದ ಕಂದನಾಗಿ ಬೆಳೆದು ಶಿಲ್ಪಕ್ಷೇತ್ರಕ್ಕೆ ಅಪೂರ್ವವಾದ ಕಾಣಿಕೆ ನೀಡಿರುವ ಮಹಾಚೇತನವೊಂದು ಇಲ್ಲಿ ಅರಳಿರುವುದು ಅನೇಕರಿಗೆ ತಿಳಿದಿರಲಿಕ್ಕಿಲ್ಲ. ಆ ಚೇತನ ಬೇರಾರೂ ಅಲ್ಲ ಕುಶಲ ಶಿಲ್ಪಿ ಗುಂಡಪ್ಪ ಮಯಾಚಾರ್ಯ.

ಬಾಗಲಕೋಟೆಗೆ ಒಂದು ವಿಶೇಷ ಚಾರಿತ್ರಿಕ ಹಿನ್ನಲೆಯಿದೆ. ಇದು ಈ ಭಾಗದ ವ್ಯಾಪಾರೀ ಕೇಂದ್ರವೂ ಕೂಡ. ಪೌರಾಣಿಕ

ಐತಿಹ್ಯದಂತೆ ಇದು ರಾವಣೇಶ್ವರನು ಸಂಗೀತಗಾರರಿಗೆ ಬಳುವಳಿಯಾಗಿ ನೀಡಿದ 'ಭಾಗ್ಯ ನಗರ' ನಂತರದ ದಿನಗಳಲ್ಲಿ ಐತಿಹಾಸಿಕ ದಾಖಲೆಗಳಂತೆ ಕಲ್ಯಾಣ ಚಾಲುಕ್ಯರ ಕಾಲದಲ್ಲಿ 'ಬಾಗಡಿಗೆ' ಎಂದು ಕರೆಯಲ್ಪಟ್ಟಿದೆ. ಆದಿಲ್‌ಶಾಹಿ ಆಡಳಿತದಲ್ಲಿ ಈ ಸ್ಥಳಕ್ಕೆ 'ಭಾಗನೂರು' ಹೆಸರಿನಲ್ಲಿ ಸಂಬೋಧಿಸಲಾಗಿದೆ. ಇಲ್ಲಿಯ ಕೆಲವು ಸಾಕ್ಷ್ಯಾಧಾರಗಳ ಮೂಲಕ ಈ ನಗರವು ಐತಿಹಾಸಿಕ ಪರಂಪರೆ, ಕಲಾಪ್ರಜ್ಞೆಯ ಹಿರಿಮೆಯಿಂದಾಗಿ ಅಂದಿನ ಆಳರಸರನ್ನು ತಣಿಸಿದ ಸಂಗತಿಗಳು ನಮಗಿಲ್ಲಿ ಹೇರಳವಾಗಿ ಲಭಿಸುತ್ತವೆ. ನಂತರದ ದಿನಗಳಲ್ಲಿ ಇದು ಬಾಗಲಕೋಟೆಯಾಗಿ ಕರೆಯಲ್ಪಡುವ ಪೂರ್ವದಲ್ಲಿ 'ಬಾಂಗಡಕೋಟೆ' ಎಂದೂ ಹೆಸರಿತ್ತು. ಇಂಥ ಚಾರಿತ್ರಿಕ ವಿಶೇಷದ ಸ್ಥಳವು ಇಂದು ಶಿಕ್ಷಣ, ಸಾಹಿತ್ಯ, ಕಲೆ ಹಾಗೂ ಸಂಗೀತ ಕ್ಷೇತ್ರಗಳಲ್ಲಿ ತನ್ನದೇ ವಿಶಿಷ್ಟತನವನ್ನು ಮೆರೆಸುತ್ತಿದೆ. ಈ ಮಣ್ಣಿನ ಸತ್ವದಲ್ಲಿ ಅನೇಕ ಕುಸುಮಗಳು ಅರಳಿವೆ. ಅವರಲ್ಲಿ ಕನ್ನಡದ ಕಾದಂಬರಿ ಹರಿಕಾರ ಕೆರೂರು ವಾಸುದೇವಾಚಾರ್, ಶಿಕ್ಷಣ ತಜ್ಞ ಡಾ. ಸಿ.ಜೆ. ನಂದೀಮಠ, ಸಾಹಿತ್ಯ ದಿಗ್ಗಜ ಡಾ. ಆರ್.ಸಿ. ಹಿರೇಮಠ, ಕಾದಂಬರಿಕಾರ ಕೃಷ್ಣಮೂರ್ತಿ ಪುರಾಣಿಕ, ವಿಮರ್ಶಕ ಪ್ರೊ.ರಾ.ಯ. ಧಾರವಾಡಕರ ಮುಂತಾದವರು ಗಣ್ಯರು. ಕಲಾಕ್ಷೇತ್ರದಲ್ಲಿ ಹೆಸರು ಮಾಡಿದ ಶ್ರೀ ಸೋಮಶೇಖರಸಾಲಿ, ಡಾ. ಬಿ.ಕೆ. ಹಿರೇಮಠ ಸಾಧನೆ ಮಾಡಿದ್ದರೆ ಶಿಲ್ಪಕಲಾ ಕ್ಷೇತ್ರದಲ್ಲಿ ತಮ್ಮ ಅಪೂರ್ವ ಕಲಾ ಸೇವೆಯಿಂದ ಹಿರಿದಾದ ಸ್ಥಾನ ಪಡೆದವರಲ್ಲಿ ಈಗ ಎಪ್ಪತ್ತಾರರ ವಯೋಮಾನದ ಶಿಲ್ಪಿ ಸ್ಥಪತಿ ಶ್ರೀ ಗುಂಡಪ್ಪ ಮಯಾಚಾರ್ಯರದು ಅಗ್ರಗಣ್ಯಸ್ಥಾನ. ಕೇವಲ ಪ್ರಾಥಮಿಕ ಶಾಲೆಯ ಎರಡನೆಯ ವರ್ಗ ಮಾತ್ರ ಓದಿನ ಭಾಗ್ಯಪಡೆದ ಈ ಗ್ರಾಮೀಣ ಪ್ರತಿಭೆ ಬೆಳೆದು ಬಂದದ್ದೆಲ್ಲ ಒಂದು ವಿಸ್ಮಯದ ಬದುಕು.

## ಹಿನ್ನೋಟ

ಬಾಗಲಕೋಟೆಗೆ ಇಲಕಲ್ ಅಥವಾ ಆಲಮಟ್ಟಿ ಮಾರ್ಗದಿಂದ ಪ್ರವೇಶ ಮಾಡುವಾಗ ಶಿರೂರ ರೈಲ್ವೆಗೇಟ್ ಪಕ್ಕದಲ್ಲಿ ಎಡಪಾರ್ಶ್ವಕ್ಕೆ ಹೊಂದಿಕೊಂಡಿರುವ ಒಂದು ಆಶ್ರಮ ಮಾದರಿಯ ಕ್ಯಾಂಪಸ್ ನಮ್ಮ ಗಮನ ಸೆಳೆಯುತ್ತದೆ. ಇಲ್ಲಿಯೇ ಶಿಲ್ಪಿ ಗುಂಡಪ್ಪನವರು ಕಂಡ ಕನಸಿನ "ಶ್ರೀಭುವನ ಶಿಲ್ಪಕಲಾ ಶಾಲೆ" ಅರಳಿಕೊಂಡಿದೆ. ಆವರಣವನ್ನು ಪ್ರವೇಶ ಮಾಡುತ್ತಿರುವಂತೆಯೇ ಹಲವು ಕಲಾ ಪ್ರಯೋಗಗಳು ನಮ್ಮನ್ನು ಸಹಜವಾಗಿ ಆಕರ್ಷಿಸುತ್ತವೆ. ಅದಕ್ಕೆ ಹೊಂದಿಕೊಂಡಿರುವ ಪುತ್ರ ವೀರೇಶ್ ವಿರಚಿತ ವರ್ಣ ಚಿತ್ರಗಳ ಆರ್ಟಗ್ಯಾಲರಿ, ಅದರ ಹಿಂಬದಿಯಲ್ಲಿ ನೂತನವಾಗಿ ಆರಂಭಿಸಿದ ಲೋಹ ಶಿಲ್ಪಕಾರ್ಯಗಾರ ಕಲಾರಸಿಕರನ್ನು ಸಂತೃಪ್ತಪಡಿಸುತ್ತವೆ. ಇವೆಲ್ಲ ಸೊಬಗನ್ನು ಅನುಭವಿಸುತ್ತ ಸಾಗಿದವರಿಗೆ ಚಾಣ ಸುತ್ತಿಗೆಯ ಸದ್ದಿನಲ್ಲಿ ಕಲಾಶಾಲೆಯೊಳಗೆ ಶಿಲ್ಪಕೆತ್ತನೆಯಲ್ಲಿ ಮಿಂಚಿನ ವೇಗದಲ್ಲಿ ಕಾರ್ಯಮಗ್ನರಾದ ಬೋಳುತಲೆಯ ವ್ಯಕ್ತಿ ನಮಗೆ ಕಾಣಸಿಗುತ್ತಾರೆ. ಅವರೇ ಕುಶಲಶಿಲ್ಪಿ ಶ್ರೀ ಗುಂಡಪ್ಪ ಮಯಾಚಾರ್ಯ-ಗುರುವಿಲ್ಲದೆ ಗುರಿತಲುಪಿದ ಮಹಾಚೇತನ !

ಹಕ್ಕಿ ಪಕ್ಷಿಗಳ ಕಲರವದ ನಡುವೆ ತಮ್ಮ ಕಾಯಕಲೋಕದಲ್ಲಿ ಕೈಲಾಸದ ಸುಖಾನಂದಗಳನ್ನು ಅನುಭವಿಸುತ್ತಿರುವ ಕೃಷ್ಣವರ್ಣದ ಈ ಹಳ್ಳಿಯ ಹೈದನು ಸಾವಿರ ಶಿಲ್ಪಗಳ ಸರದಾರನೆಂದಾಗ ಕೆಲವರಿಗೆ ವಿಸ್ಮಯವಾಗುತ್ತದೆ. ಇನ್ನು ಹಲವರಿಗೆ ಇಂಥ ಅಪೂರ್ವ ವ್ಯಕ್ತಿಯ ಸಾಹಸ ಗಾಥೆಯನ್ನರಿಯಲು ಕುತೂಹಲವುಂಟಾಗುತ್ತದೆ. ಹೆಚ್ಚಿನ ಓದು ಬರಹಗಳನ್ನರಿಯದ ಈ ಮುಗ್ಧಶಿಲ್ಪಿ ತಮ್ಮ ಇಂದಿನ ಎಪ್ಪತ್ತಾರರ ಸಂಭ್ರಮದ ಬದುಕಿನಲ್ಲಿ ಮಾಡಿದ ಸಾಧನೆ, ತಲುಪಿದ ಗುರಿ ಮಾತ್ರ ಎಲ್ಲರೂ ಮೆಚ್ಚುವಂಥದ್ದಾಗಿದೆ.

ಕಲ್ಲನ್ನು ಹೂವಿನಿಂದ ಅರಳಿಸಿ ತಮ್ಮದೇ ವಿಶಿಷ್ಟತನ ಮೆರೆಸಿ ಆಶ್ಚರ್ಯಕರ ರೀತಿಯಲ್ಲಿ ಇಡೀ ಜೀವನವನ್ನು ರೂಪಿಸಿಕೊಂಡಿರುವ ವ್ಯಕ್ತಿ ಭಾಗ್ಯನಗರಿಯ ಈ ವರಶಿಲ್ಪಿ. ಯಾವ ಗುರುವೂ ಇವರಿಗೆ ಶಿಲ್ಪಶಾಸ್ತ್ರದ 'ಓ ನಾಮ' ಹೇಳಲಿಲ್ಲ. ತಮ್ಮದೇ ಆದ ಸತತ ಪ್ರಯತ್ನ ಸಾಧನೆ ಮಾತ್ರದಿಂದ 'ಏಕಲವ್ಯ' ನಂತೆ ಕಲಾಕೌಶಲ್ಯ ಮೆರೆಸುತ್ತಿರುವುದು ವಿಚಿತ್ರವಾದರೂ ಸತ್ಯ ಸಂಗತಿ. ಚಾಲುಕ್ಯ ನಾಡಿನ ವಾಸ್ತುಕಲಾಸಿರಿ ಸಂಪತ್ತಿನ ಮಧ್ಯದಲ್ಲೇ ಶಿಲ್ಪಿ ಗುಂಡಪ್ಪನವರ ಈ ಯಶಸ್ವಿ ಬದುಕೂ ಅರಳಿಕೊಂಡಿದೆ. ಇಂದಿನ ಇಳಿ ವಯಸ್ಸಿನಲ್ಲೂ ಇಪ್ಪತ್ತರ ಯುವಕನಂತೆ ಉತ್ಸಾಹದಲ್ಲಿ ಕೆಲಸ ಮಾಡುವುದನ್ನು ಕಂಡಾಗ ಕೆಲವರಿಗೆ ಆಶ್ಚರ್ಯವಾಗುತ್ತದೆ. ತಮ್ಮ ೨೯ನೆಯ ವಯೋಮಾನದಲ್ಲಿ ಕಲಾಕ್ಷೇತ್ರಕ್ಕೆ ಪ್ರವೇಶ ಮಾಡಿದ ಗುಂಡಪ್ಪ ಮಯಾಚಾರ್ಯರು ಮೊಟ್ಟಮೊದಲು ಶಿಲ್ಪಿಯಾಗಿ ಗುರುತಿಸಿಕೊಂಡಿದ್ದು ೧೯೬೬ರಲ್ಲಿ ರಚಿಸಿದ 'ಬಿಳ್ಳೂರ ಸ್ವಾಮೀಜಿಗಳ' ಶಿಲ್ಪದಿಂದ ಈಗ ಮೂವತ್ತೈದು ವರ್ಷಗಳಲ್ಲಿ ಎರಡೂವರೆ ಸಾವಿರದಷ್ಟು ಅವರಿಂದ ಶಿಲ್ಪ ನಿರ್ಮಾಣವಾಗಿವೆ ಎಂಬುದು ಊಹಿಸಲು ಆಗದ ಸಂಗತಿ. ಕ್ಲಿಷ್ಟಕರವಾದ ಶಿಲ್ಪಕಲೆಯಲ್ಲಿ ಮಾಡಿದ ಇಂಥ ಸಾಧನೆ ಮಹೋನ್ನತವಾದುದೆನಿಸುತ್ತದೆ. ಕೇವಲ ತಮ್ಮ ಐದಾರು ಜನ ಮಕ್ಕಳ ಜತೆಯಲ್ಲಿ ಇಷ್ಟೊಂದು ಬೃಹತ್ ಪ್ರಮಾಣದ ಶಿಲ್ಪಗಳನ್ನು ಹೇಗೆ ನಿರ್ಮಿಸಿದರೆಂಬುದು ಕೆಲವರಿಗಂತೂ ನಂಬಲಾಗದ ಮಾತು. ತಮ್ಮದೇ ತಂತ್ರ ನೈಪುಣ್ಯತೆಗಳಿಂದ ಆಕರ್ಷಣೀಯ ಶಿಲ್ಪಕೃತಿಗಳನ್ನು ರಚಿಸಿದ ಉತ್ತರ ಕರ್ನಾಟಕದ ಜನಪ್ರಿಯ ಶಿಲ್ಪಿಯ ದೇಶೀತನ ಮೆಚ್ಚುವಂಥದ್ದು ಕೂಡ.

## ಆರಂಭದ ಬದುಕು

ಶಿಲ್ಪಿ ಗುಂಡಪ್ಪ ಜನಿಸಿದ್ದು ೧೬ನೆಯ ಡಿಸೆಂಬರ್ ೧೯೨೫ ರಲ್ಲಿ.

ಬಾಗಲಕೋಟೆ ಸಮೀಪದ ಹೆರಕಲ್‌ದಲ್ಲಿ ವಾಸವಾಗಿದ್ದ ವಿಶ್ವಕರ್ಮ ಕುಟುಂಬದ ದೇವೇಂದ್ರಪ್ಪ ಹಾಗೂ ಶ್ರೀಮತಿ ಲಕ್ಷ್ಮಮ್ಮನವರ ಅದೃಷ್ಟದ ಪುತ್ರನಾಗಿ ಬೆಳೆದ ಗುಂಡಪ್ಪ ಬಾಲ್ಯದಲ್ಲಿ ಕಡುಬಡತನದ ಕಹಿಯುಂಡೇ ರೂಪುಗೊಂಡಿದ್ದು. 'ಬಡತನ ಬಂಗಾರ' ವೆಂದು ಮತ್ತೆ ಮತ್ತೆ ಕನವರಿಸುವ ಶಿಲ್ಪಿ ಗುಂಡಪ್ಪನವರದು 'ದೈತ್ಯ ಪ್ರತಿಭೆ' ಎಂದರೆ ಉತ್ಪ್ರೇಕ್ಷೆಯಲ್ಲ. ಕ್ರೋಧನನಾಮ ಸಂವತ್ಸರದ ಪುಷ್ಯಶುದ್ಧ ಪ್ರತಿಪದೆಯಂದು ಮೂಲಾ ನಕ್ಷತ್ರದಲ್ಲಿ ಜನಿಸಿದ ಗುಂಡಪ್ಪನವರಿಗೆ ಒಂದೂವರೆ ವರ್ಷದಲ್ಲಿಯೇ ಪಿತೃವಾತ್ಸಲ್ಯದಿಂದ ವಂಚಿತರಾಗಬೇಕಾಯಿತು. ವಂಶ ಪಾರಂಪರ್ಯವಾಗಿ ಶಿಲ್ಪಾಚಾರ್ಯ ಮನೆತನ ಶ್ರೀ ಗುಂಡಪ್ಪನವರದು. ಇವರ ಮುತ್ತಜ್ಜ ಶಿಲ್ಪಿಯಾಗಿದ್ದರಂತೆ ತಾತ ಹಾಗೂ ತಂದೆಯುವರು ಇದನ್ನು ಮುಂದುವರೆಸಲಿಲ್ಲ. ನಾಲ್ಕನೆಯ ತಲೆಮಾರಿನ ಈ ಶಿಲ್ಪಿಗೆ ಸುಕೃತ ಫಲವಾಗಿ ಶಿಲ್ಪ ಸೃಷ್ಟಿಕಾರ್ಯವು ಅದಮ್ಯ ಚೇತನವಾಗಿ ಹೊರ ಹೊಮ್ಮಿದೆ. ಅದು ಮಕ್ಕಳೆಲ್ಲರಲ್ಲಿ ಮತ್ತು ಮೊಮ್ಮಕ್ಕಳಲ್ಲೂ ಅವಿರತವಾಗಿ ಸಾಗಿಬಂದಿದೆ. ತಂದೆಯ ನಿಧನಾ ನಂತರ ಸೋದರ ಮಾವ ದಿ. ಸಕರಪ್ಪನವರ ಆಶ್ರಯದಲ್ಲಿದ್ದು ಗುಂಡಪ್ಪ ನಿಕೃಷ್ಟ ಬದುಕು ಸಾಗಿಸುತ್ತಿದ್ದಾಗ ಇವರು ಮಾಡಿದ್ದು ಮರದ ಕೆತ್ತನೆ ಹಾಗೂ ಕಮ್ಮಾರಿಕೆಯಂಥ ಕುಲ ಕಸುಬುಗಳನ್ನೇ. ತಮ್ಮ ಶೈಶವದ ಆರಂಭ ಕಾಲದಿಂದಲೂ ಹೋರಾಟದ ಜಾಯಮಾನ ಹೊಂದಿದ ಗುಂಡಪ್ಪನವರು ಬದುಕನ್ನು ಚಾಲೆಂಜ್ ಆಗಿ ಸ್ವೀಕರಿಸಿದರು. ಕಷ್ಟ ಕಾರ್ಪಣ್ಯಗಳು ಸಾಲು ಸಾಲಾಗಿ ಬಂದು ಮುತ್ತಿಕೊಂಡರೂ ಎದೆಗುಂದದೆ ಎಲ್ಲವನ್ನು ಎದುರಿಸಿ ಗುರಿತಲಪಿದವರು ಶಿಲ್ಪಿ ಗುಂಡಪ್ಪ. ಈ ಹಿನ್ನಲೆಯೇ ತಾವೊಬ್ಬ ಸಮರ್ಥ ಶಿಲ್ಪಿಯಾಗಿ ಅರಳಲು ಕಾರಣವಾಯಿತೆಂದು ಅವರು ಸದಾ ಜ್ಞಾಪಿಸಿಕೊಳ್ಳುತ್ತಾರೆ.

ಕುಟುಂಬ ನಿರ್ವಹಣೆಗೆಂದು ನಾಡಿನ ಉದ್ದಗಲಕ್ಕೂ ಇವರು ಓಡಿಯಾಡಿದ್ದಾರೆ. ಕುಲಕಸುಬಾದ ಮರದ ಕೆತ್ತನೆ ಕೆಲಸದಿಂದ ಸಂಸಾರ ಸಾಗದಾಗಲು ಅನಿವಾರ್ಯವಾಗಿ ಖಾದಿ ಗ್ರಾಮೋದ್ಯೋಗ ಮಂಡಳಿಗಳಲ್ಲಿ ಮೇಸ್ತ್ರಿಯಾಗಿ ನಿಷ್ಠೆಯಿಂದ ಸೇವೆ ಮಾಡಿದ್ದಾರೆ. ಅದಕ್ಕೂ ಪೂರ್ವದಲ್ಲಿ ಬೆಳಗಾವಿಯ ಬೆಮ್ಕೋ ಕಂಪೆನಿಯಲ್ಲಿ 'ಪ್ಯಾಟರ್ನ ಮೇಕರ್' ಕಾರ್ಯದಲ್ಲಿ ಕೆಲಸ ಮಾಡಿದ ಅನುಭವ ಹೆಚ್ಚು ಭರವಸೆ ನೀಡಿದ್ದನ್ನು ಈ ಶಿಲ್ಪಿ ನೆನೆಯುತ್ತಾರೆ. ಸ್ವಾಭಿಮಾನದ ಗುಂಡಪ್ಪನವರಲ್ಲಿ ಅಧಿಕಾರ ಶಾಹಿಯ ಅಟ್ಟಹಾಸ, ದರ್ಪ ದೌರ್ಜನ್ಯಗಳು ಕೆರಳಿಸಿದವು. ಕಂಗೆಡಸಿ ಮಯಾಚಾರ್ಯ ಗುಂಡಪ್ಪನವರ ಸಮಗ್ರ ಬದುಕನ್ನೇ ಬದಲಿಸಿದವು. ಶಿಲ್ಪಿಯಾಗಿ ಅರಳಲು ಹೊಸ ತಿರುವನ್ನುಂಟುಮಾಡಿದವು.

## ಬೆಳೆಯ ಸಿರಿ ಹಾಗೂ ಹೊಸ ತಿರುವು

ಎಳೆವಯಸ್ಸಿನಿಂದ ಗುಂಡಪ್ಪನವರಲ್ಲಿ ಮೊದಲಿನಿಂದಲೂ ಕಲೆ, ಸಂಗೀತಗಳಲ್ಲಿ ಅಪಾರವಾದ ಒಲವು, ಆಸಕ್ತಿ. ಪ್ರಾಥಮಿಕ ಶಾಲೆಯಲ್ಲಿ ತನಗೆ ಅಭ್ಯಾಸ ಹೇಳುವ ಶಿಕ್ಷಕರದೇ ವ್ಯಂಗ್ಯ ಚಿತ್ರ ರಚಿಸಿ ಖುಷಿಪಡುವ ಜಾಯಮಾನ. ವಿವಿಧ ವಿನೋದ ಪ್ರಸಂಗಗಳನ್ನು ತನ್ನ ಸ್ಲೇಟಿನ ಮೇಲೆ ಬರೆದು ಒಡನಾಡಿಗಳಿಗೆ ತೋರಿಸಿ ಖುಷಿ ಪಡುವಂಥ ಸೊಗಸುಗಾರ ವ್ಯಕ್ತಿ ಗುಂಡಪ್ಪ. ಸಂಗೀತ, ಸಿನೆಮಾಗಳ ಬಗೆಗಿನ ಗೀಳಿನಿಂದಾಗಿ ಊರೂರು ಅಲೆದ ಪೋಕರಿತನವೂ ಇವರಲ್ಲಿತ್ತು. ಇಂಥ ಕೆಲವು ಹವ್ಯಾಸಗಳಿಂದಾಗಿ ಸೋದರ ಮಾವನ ವಾಗ್ದಂಡನೆಗೆ ಗುರಿಯಾಗಿ ಬಾಲ್ಯದಲ್ಲಿಯೇ ಮನೆಯಿಂದ ಬೇರೆ ಕೆಲಸವನ್ನರಸಿ ಪಲಾಯನ. ಬಡತನದ ಬೇಗೆಯಲ್ಲಿರುವಾಗಲೇ ತಾಯಿಯ ಮರಣದ ಆಘಾತ. ದಿಕ್ಕುಕಾಣದ ಬದುಕು ಇವೆಲ್ಲ

ಗುಂಪ್ಪನವರ ಬಾಲ್ಯವು ನೀಡಿದ ಬಳುವಳಿಗಳು. ಶಿಲ್ಪಶಾಸ್ತ್ರದ ಬಗೆಗೆ ಒಂದಕ್ಷರ ಕಲಿಯದ ಗುಂಡಪ್ಪನವರಲ್ಲಿ 'ಶಿಲ್ಪ ಸರಸ್ವತಿ' ಅಂತರ್ಮುಖಿಯಾಗಿದ್ದಾಳೆ. ಶಿಲ್ಪಿಯಬದುಕನ್ನು ಸಾರ್ಥಕಪಡಿಸಿದ್ದಾಳೆ.

೧೯೬೬ನೆಯ ವರ್ಷವು ಮಯಾಚಾರ್ಯ ಗುಂಡಪ್ಪನವರ ಜೀವನಕ್ಕೆ ಹೊಸ ಮೆರುಗನ್ನಿತ್ತು ಅವರ ಜೀವನ ಮಾರ್ಗವನ್ನೆ ಬದಲಿಸಿತು. ನಿರುದ್ಯೋಗಿಯಾಗಿ ಅಲೆಮಾರಿಯಾಗಿದ್ದ ಗುಂಡಪ್ಪನವರಿಗೆ ಬಾಗಲಕೋಟೆಯ ವರ್ತಕರೊಬ್ಬರು ಬಸವೇಶ್ವರ ವಿದ್ಯಾವರ್ಧಕ ಸಂಘದ ಆವರಣದಲ್ಲಿ ಸ್ಥಾಪಿಸಬೇಕೆಂದಿದ್ದ ಬಿಳ್ಳೂರ ಶ್ರೀ ಗುರುಬಸವ ಮಹಾಸ್ವಾಮಿಯವರ ಮೂರ್ತಿಶಿಲ್ಪ ರಚನೆಗೆ ಆಹ್ವಾನ ನೀಡಿದಾಗ ಯಾವುದೇ ಶಿಲ್ಪದ ವಿಶೇಷ ಅನುಭವವಿರಲಿಲ್ಲ. ಕುಟುಂಬ ನಿರ್ವಹಣೆಗೆ ಮಾರ್ಗವಿಲ್ಲದ ಸಂದರ್ಭದಲ್ಲಿ ಈ ಅವಕಾಶವನ್ನು ಸಮರ್ಥರೀತಿಯಲ್ಲಿಯೇ ಸದುಪಯೋಗ ಪಡಿಸಿಕೊಂಡು ಶಿಲ್ಪ ರಚಿಸಿ ಯಶಸ್ಸು ಪಡೆದರು ಗುಂಡಪ್ಪ. ಕೇವಲ ಇಪ್ಪತ್ತಾರು ದಿನಗಳಲ್ಲಿ ನೀಡಿದ ಭಾಷೆಯಂತೆ ಮೂರಡಿ ಎತ್ತರದ ಶ್ರೀ ಬಿಳ್ಳೂರ ಗುರುಬಸವ ಸ್ವಾಮೀಜಿ ವಿಗ್ರಹವು ಶಿಲ್ಪಿಯ ಚಮತ್ಕಾರಿಕ ಕೈಚಳಕದಿಂದಲೇ ಕಲಾತ್ಮಕವಾಗಿ ನಿರ್ಮಾಣಗೊಂಡ ಮೊಟ್ಟ ಮೊದಲಿನ ಶಿಲ್ಪಕೃತಿಯು ಶ್ರೀ ಗುಂಡಪ್ಪ ಮಾಯಾಚಾರ್ಯರನ್ನು ಶಿಲ್ಪಿಯನ್ನಾಗಿ ರೂಪಿಸಿತೆಂಬುದು ಗಮನಾರ್ಹವಾದ ಸಂಗತಿ.

## ಅವಿರತ ಶ್ರಮ ಸಾಧನೆಗಳು

ಬಾಗಲಕೋಟೆಯ ಬಸವೇಶ್ವರ ಕಾಲೇಜ್ ಆವರಣದಲ್ಲಿ ಪ್ರತಿಷ್ಠಾಪನೆಗೊಂಡ ಶಿಲ್ಪಿ ಗುಂಡಪ್ಪ ವಿರಚಿತ ಸ್ವಾಮೀಜಿ ವಿಗ್ರಹದ ಮೊದಲನೆಯ ಪ್ರಯೋಗ ಅವರಿಂದ ಮತ್ತೆ ಹಲವಾರು

ಶಿಲ್ಪರಚನಾಕಾರ್ಯಕ್ಕೂ ನಾಂದಿಯಾಯಿತು. ಇದೇ ಉತ್ಸಾಹದಲ್ಲಿಯೇ ಗುಂಡಪ್ಪನವರಿಂದ ರಾಧಾಕೃಷ್ಣ, ತಾಯಿಮಗು, ಲಾಸ್ಯದ ಶಿವ, ನಟರಾಜ ವಿಗ್ರಹಗಳು ರಚನೆಗೊಂಡು ಪ್ರೇರಣೆ ನೀಡಿದವು. ಇವರ ಬಾಲ್ಯ ಮಿತ್ರರಾಗಿದ್ದ ಬಾಗಲಕೋಟೆಯ 'ಪದ್ಮನಾಭ ಭವನ'ಮಾಲೀಕರು ಈ ಶಿಲ್ಪಕೃತಿಗಳನ್ನು ತಮ್ಮ ಹೋಟೆಲ್‌ನಲ್ಲಿ ಪ್ರದರ್ಶನಕ್ಕೆ ವ್ಯವಸ್ಥೆ ಮಾಡಿದ್ದರಿಂದ ಹೆಚ್ಚು ಪ್ರೋತ್ಸಾಹವು ದೊರೆಯಿತು. ಶಾಂತಿನಿವಾಸ ನಾಟಕ ಪ್ರಯೋಗಕ್ಕಾಗಿ ಖ್ಯಾತ ಚಲನಚಿತ್ರ ತಾರೆ ಶ್ರೀಮತಿ ಪಂಡರಿಬಾಯಿಯವರು ಬಾಗಲಕೋಟೆಗೆ ಬಂದು ಪದ್ಮನಾಭ ಭವನದಲ್ಲಿ ವಾಸ್ತವ್ಯ ಮಾಡಿರುವ ಸಂದರ್ಭದಲ್ಲಿ ರಾಧಕೃಷ್ಣ ಆಕರ್ಷಕ ಶಿಲ್ಪಕ್ಕೆ ಮನಸೋತರು. ಮುನ್ನೂರು ರೂಪಾಯಿಗಳಿಗೆ ಖರೀದಿಸಿ ಶಿಲ್ಪಿ ಗುಂಡಪ್ಪನವರ ಶಿಲ್ಪ ಸೃಜನಕಾರ್ಯಕ್ಕೆ ಹೆಚ್ಚಿನ ಚಾಲನೆ ನೀಡಿದರು. ಆ ನಂತರದ ದಿನಗಳಲ್ಲಿ ಈ ಶಿಲ್ಪಿಯಿಂದ ಹತ್ತು ಹಲವು ಶಿಲ್ಪಗಳು ರಚನೆಗೊಂಡು ಅವರ ಯಶಸ್ವೀ ಜೀವನಕ್ಕೆ ಕಾರಣವಾದವು. ಶಿಲ್ಪಿ ಗುಂಡಪ್ಪನವರಿಂದ ರಚನೆಗೊಂಡಿರುವ ಇತ್ತೀಚಿನ ಶಿಲ್ಪಗಳಂತೂ ವಿಶೇಷ ಆಕರ್ಷಣೆಯಿಂದಾಗಿ ಕರ್ನಾಟಕದಲ್ಲಷ್ಟೇಯಲ್ಲ ದೇಶದ ಮೂಲೆಗೂ ಸಾಗಿ ಪ್ರತಿಷ್ಠಾಪನೆಗೊಂಡಿವೆ ಎಂಬುದು ಹೆಗ್ಗಳಿಕೆ ಮಾತು. ಕೆಲವು ಮೂರ್ತಿಗಳು ವಿದೇಶಿಯರಲ್ಲೂ ಕೈಸೇರಿವೆ. ಶಿಲ್ಪಿಯ ಪ್ರತಿಷ್ಟೆ ಪರಾಕಾಷ್ಠೆಗೇರಿದೆ. ಆಕರ್ಷಕ ಶಿಲ್ಪ ಸೃಷ್ಟಿಕಾರ್ಯದ ಈ ರಹಸ್ಯ ಯಾರಿಗೂ ತಿಳಿಯದಾಗಿದೆ.

ಶಿಲ್ಪಿ ಗುಂಡಪ್ಪ ಮಯಾಚಾರ್ಯರು ಅನೇಕ ದೇವ ದೇವತೆಗಳ, ಸಂತ ಶರಣರ, ಮಹಾನುಭಾವ, ದೇಶದ ನೇತಾರರ ವಿಗ್ರಹಗಳನ್ನು ನಿರ್ಮಿಸಿ ತಮ್ಮ ಪರಿಪೂರ್ಣ ಕಲಾಶಕ್ತಿ ಅಭಿವ್ಯಕ್ತಪಡಿಸಿದ್ದು ಗಮನಿಸಿದಾಗ ಒಂದಕ್ಕಿಂತಲೂ ಇನ್ನೊಂದು ಭಿನ್ನ ಕಲಾನೈಪುಣ್ಯತೆ ಪಡೆದಿರುವುದು ಕಂಡು ಬರುತ್ತದೆ. ಶಾರೀರಿಕ

ಹಾವ ಭಾವಗಳಲ್ಲಿ ವಿಶೇಷತೆಯಿರುತ್ತದೆ. ವಿಗ್ರಹಗಳು ನೋಡುವವರನ್ನು ಮನ ಸೆಳೆಯುತ್ತವೆ. ಗುಂಡಪ್ಪನವರು ಕೈಯಲ್ಲಿ ಸುತ್ತಿಗೆ ಶಿಲ್ಪ ಸಲಕರಣೆಯೊಂದಿಗೆ ತಮ್ಮ ಕಲಾಶಾಲೆಯಲ್ಲಿ ಸೇರಿ ಶಿಲೆಯೆದುರು ಕುಳಿತರೆ ಊಟ ಉಪಹಾರಗಳತ್ತ ಲಕ್ಷ್ಯವಾಗುವುದಿಲ್ಲ. ಪ್ರಶಾಂತವಾಗಿ ಏಕಚಿತ್ತದಲ್ಲಿ ಮೂರ್ತಿ ಕೆತ್ತುವಾಗಿನ ಅವರ ಸಂಭ್ರಮ ಉತ್ಸಾಹಗಳು ಈಗಿನ ಎಪ್ಪತ್ತಾರರ ಇಳಿವಯಸ್ಸಿನಲ್ಲೂ ಚೇತೋಹಾರಿಯಾಗಿರುವುದು ಒಂದು ವಿಶೇಷ. ಶಿಲ್ಪಗಳ ರಚನೆಯಲ್ಲಿ ಕರಾರು ವಾಕ್ಯದಂತೆ ಹೇಳಿದ ಅವಧಿಯಲ್ಲಿ ನಿರ್ಮಾಣಕಾರ್ಯ ಮುಗಿಯಲೇಬೇಕೆಂಬುದು ರೂಢಿಸಿಕೊಂಡು ಬಂದ ಸ್ವಭಾವವಾಗಿದೆ. ದೈನಂದಿನ ಶಿಲ್ಪೋದ್ಯಮದಲ್ಲಿ ಅವರ ಆರೂ ಜನ ಪುತ್ರರೂ ಸಹಕಾರ ನೀಡಿ ಅವರ ಕಾರ್ಯಕ್ಷೇತ್ರದ ಪ್ರಗತಿ ಹಾಗೂ ಹರಹಿಗೂ ಕಾರಣರಾಗಿದ್ದಾರೆ. ಮಹೋನ್ನತವಾದ ಕಲಾಸೇವೆಯ ಬಗೆಗೆ ಮಕ್ಕಳೆಲ್ಲರಿಗೂ ಸೂಕ್ತ ತರಬೇತಿ ಹಾಗೂ ಮಾರ್ಗದರ್ಶನ ನೀಡುವಲ್ಲಿ ಶಿಲ್ಪಿ ಗುಂಡಪ್ಪ ಸದಾ ಕಾಳಜಿ ವಹಿಸುವುದನ್ನು ಮರೆಯುವುದಿಲ್ಲ.

ಇವತ್ತು ಶಿಲ್ಪಿ ಗುಂಡಪ್ಪನವರ ಶಿಲ್ಪ ಪರಿವಾರದ ಪರಿಧಿಯು ವಿಸ್ತೃತಗೊಂಡಿದೆ. ಕಾರ್ಯವೈಖರಿ ಬೃಹತ್ತಾಗಿ ಬೆಳೆದಿದೆ. ೧೯೮೨ ರಲ್ಲಿ ಇವರು ಬಾಗಲಕೋಟೆ ರೈಲ್ವೆಗೇಟ್ ಪಕ್ಕದಲ್ಲಿ ಪ್ರಾರಂಭಿಸಿದ 'ಶ್ರೀ ಭುವನ ಶಿಲ್ಪಕಲಾ ಶಾಲೆ'ಯೊಂದಿಗೆ ಭುವನ ಲೋಹ ಶಿಲ್ಪ ಕಾರ್ಯಾಗಾರವನ್ನು ಕಳೆದ ೧೯೯೬ರಲ್ಲಿ ಪ್ರಾರಂಭಿಸಿ ಶಿಲಾ ಶಿಲ್ಪಕಾರ್ಯದೊಂದಿಗೆ ಲೋಹ ಶಿಲ್ಪ ನಿರ್ಮಾಣದ ಸಾಹಸಕ್ಕೂ ಕೈಹಾಕಿರುವುದು ಒಂದು ಅಸಾಧಾರಣ ಸಾಧನೆ. ಈ ನಂತರದಲ್ಲಿ ಕಳೆದೆರಡು ವರ್ಷಗಳ ಹಿಂದೆ 'ಶ್ರೀಗಂಗಾಧರ ವಾಸ್ತುಕಲಾ ಕಾರ್ಯಗಾರ'ದ ಹೊಳಹು ಹಾಕಿ ಅಲ್ಲಿ ದೇವಾಲಯ ವಾಸ್ತುಶಿಲ್ಪಕ್ಕೆ ಸಂಬಂಧಿಸಿದ ಬೃಹತ್ ಶಿಲ್ಪಗಳನ್ನು ಯಂತ್ರಗಳ ಸಹಾಯದಿಂದ

ರಚಿಸುವ ಸಾಹಸಕ್ಕಿಳಿದಿದ್ದಾರೆ. ಆಧುನಿಕ ತಾಂತ್ರಿಕತೆಯನ್ನು ಬಳಕೆ ಮಾಡಿ ಸಾಂಪ್ರದಾಯಕ ಕಲೆಯಲ್ಲಿ ತಮ್ಮ ವಿಶಿಷ್ಟತೆಯನ್ನು ಈ ಶಿಲ್ಪಿ ಮೆರೆಸಿರುವುದನ್ನು ಕಾಣಬಹುದು.

## ಕಲಾ ಶಕ್ತಿ, ಅಭಿರುಚಿಗಳು

ಕಲಾಕಲ್ಪಕ ಶಕ್ತಿ ಗುಂಡಪ್ಪ ಶಿಲ್ಪಿಯಲ್ಲಿ ಬಾಲ್ಯದಿಂದಲೇ ಬೆಳೆದು ಬಂದ ಹವ್ಯಾಸ. ಕಣ್ಣಿಗೆ ಕಂಡ ದೃಶ್ಯಗಳನ್ನು ಮನದ ಭಿತ್ತಿಯಲ್ಲಿರಿಸಿಕೊಂಡು ಬಿಡುವಿನ ಸಂದರ್ಭದಲ್ಲಿ ಯಥಾವತ್ತಾಗಿ ಚಿತ್ರಿಸುವಲ್ಲಿ ಗುಂಡಪ್ಪನವರದು ಹೆಚ್ಚಿನ ಆಸಕ್ತಿ. ೧೯೪೫ರಲ್ಲಿ ತಾಯಿ ಲಕ್ಷ್ಮಮ್ಮನ ನಿಧನಾ ನಂತರದಲ್ಲಿ ಈ ಹದಿ ಹರೆಯದ ಯುವಕನಿಗೆ ಸೋದರಮಾವ ಸಕರಪ್ಪನವರು ಮರಗೆತ್ತನೆ ಕಾರ್ಯದಲ್ಲಿ ಪರಿಣತಿಗೊಳಿಸಿ ಇವರಲ್ಲಿಯ ಕಲಾತ್ಮಕ ಕಾರ್ಯಕ್ಕೆ ಪ್ರೇರಣೆ ನೀಡಿದ ವ್ಯಕ್ತಿ. ಪ್ರಯೋಗಾತ್ಮಕ ಬುದ್ಧಿ ಕೌಶಲ್ಯ, ಕಾರ್ಯೋತ್ಸಾಹದ ತುಡಿತಗಳಿಂದಾಗಿ ಗ್ರಾಮೀಣ ಪ್ರದೇಶದಲ್ಲಿದ್ದ ಗುಂಡಪ್ಪ ಶಿಲ್ಪಿ ಮಾವನ ಕಿರುಕುಳಕ್ಕೆ ಬೇಸತ್ತು. ಊರಿಂದ ಪಲಾಯನಗೈದು ಬೆಳಗಾವಿಯನ್ನು ಸೇರಿ ಉಪಜೀವನಕ್ಕಾಗಿ ಬೇರೊಂದು ವೃತ್ತಿ ಕೈಕೊಳ್ಳಬೇಕಾಯಿತು. ಬೆಮ್ಕೋ ಕಂಪನಿಯಲ್ಲಿ ಪ್ಯಾಟರ್ನಮೇಕರ ಕೆಲಸಕ್ಕೆ ಸೇರಿದ ಗುಂಡಪ್ಪ ತಮ್ಮ ಕಾರ್ಯ ನಿಷ್ಠೆ, ಕೌಶಲ್ಯಗಳಿಂದ ಅಧಿಕಾರಿಗಳಿಂದ, ಮೆಚ್ಚುಗೆಗೆ ಪಾತ್ರವಾಗಿ ಮೇಸ್ತ್ರಿ ಹುದ್ದೆಯನ್ನೂ ಗಳಿಸಿ ನೂತನ ಸಂಸಾರವನ್ನೂ ಅಲ್ಲಿ ಪ್ರಾರಂಭಿಸಿದ್ದಾಯಿತು. ಎಳೆತನದಲ್ಲಿಯ ತಮ್ಮ ಆ ಚುರುಕು ಬೌದ್ಧಿಕ ಶಕ್ತಿಯಿಂದಾಗಿ ಎಲ್ಲರ ಪ್ರೀತಿ ವಿಶ್ವಾಸಗಳನ್ನು ಸೆಳೆದಿದ್ದ ಗುಂಡಪ್ಪನವರು ಶ್ರೀ ಬಾಬೂರಾವ್ ಪುಷಾಳ್‌ಕರ ಎಂಬ ಹಿರಿಯ ಕೆಲಸಗಾರರಲ್ಲಿ ವಿಶ್ವಾಸ, ಅಭಿಮಾನಕ್ಕೆ ಪಾತ್ರರಾಗಿದ್ದರಿಂದ ಕೆಲಸಕ್ಕೆ ಹೆಚ್ಚು ಉತ್ತೇಜನವೂ ದೊರೆಯಿತು. ಈ ಸಂತೋಷ ತೃಪ್ತಿ



ಮೂರ್ತಿ ಕೆತ್ತನೆಯಲ್ಲಿ

ಬಹುಕಾಲವಾಗಿ ಶಿಲ್ಪಿ ಗುಂಡಪ್ಪನವರಿಗೆ ದೊರೆಯಲಿಲ್ಲ. ನಗರದಲ್ಲಿ ಬೆಳೆದ ಕೌಟುಂಬಿಕ ನಿರ್ವಹಣೆ ದುಬಾರಿಯಾಗಿದ್ದಕ್ಕೆ ಶಿಲ್ಪಿ ಗುಂಡಪ್ಪ ಮತ್ತೆ ಸೋದರಮಾವನ ಆಶ್ರಯಕ್ಕೆ ಬಂದು ನಿಂತುಕೊಳ್ಳುವಂತಾಯಿತು. ಈ ಸಂದರ್ಭದಲ್ಲಿ ಬೆಳಗಾವಿಯ ಕೆಲಸಕ್ಕೆ ರಾಜೀನಾಮೆ ನೀಡಿ ಮತ್ತೆ ಕಲಾದೇವತೆಯನ್ನೇ ಆಶ್ರಯಿಸಬೇಕಾಯಿತು. ಸಕರಪ್ಪನವರು ಹುನಗುಂದದಲ್ಲಿ ಮಾರುತಿದೇವರ ರಥ ನಿರ್ಮಾಣ ಕೆಲಸಮಾಡಲು ಒಪ್ಪಿದ್ದರಿಂದ ಈ ಕಾರ್ಯದಲ್ಲಿ ಸೇವೆಗೆ ತೊಡಗುವುದು ಅನಿವಾರ್ಯವಾಯಿತು. ಹುನಗುಂದದ ಕಾಂಗ್ರೆಸ್ ಮುಖಂಡರಾಗಿದ್ದ ದಿ. ಪ್ರಾಣೇಶಾಚಾರ್ ಅವರೇ ರಥ ನಿರ್ಮಾಣ ಕಾರ್ಯದಲ್ಲಿ ಪ್ರಮುಖರಾಗಿ ಅವಕಾಶವನ್ನು ಕಲ್ಪಿಸಿದರು. ಯುವ ಶಿಲ್ಪಿ ಗುಂಡಪ್ಪನವರಲ್ಲಿ ಸುಪ್ತವಾಗಿದ್ದ ಕಲಾಶಕ್ತಿ ಬೆಳೆಯಲು ಅವಕಾಶ ಒದಗಿತು. ೧೯೫೪ರಲ್ಲಿ ಹುನಗುಂದದ ಮಾರುತಿದೇವರ ಹದಿನೈದಡಿಯಲ್ಲಿಯ ರಥವೇ ಇವರ ಕಾಷ್ಟಶಿಲ್ಪದ ಮೊದಲ ಕೊಡುಗೆಯನ್ನ ಬಹುದು. ಎರಡೂವರೆ ಸಾವಿರ ರೂಪಾಯಿಗಳನ್ನು ರಥ ನಿರ್ಮಾಣಕ್ಕಾಗಿ ಸೋದರಮಾನನೊಂದಿಗೆ ಗಳಿಸಿದ ಗುಂಡಪ್ಪನವರಿಗೆ ಕಲೆಯ ಆವಿಷ್ಕಾರದಲ್ಲಿ ಆಸಕ್ತಿಯೂ ಬೆಳೆಯಿತು. ಆ ನಂತರದಲ್ಲಿ ಕಮತಗಿಯಲ್ಲಿ ಇನ್ನೊಂದು ರಥ ನಿರ್ಮಾಣಮಾಡಿ ಆ ಭಾಗದ ರಥಕಾರರಾಗಿ ಜನಪ್ರಿಯತೆ ಪಡೆದರು. ಬಿಡುವಿನ ದಿನಗಳಲ್ಲಿ ಮಕ್ಕಳ ಬೊಂಬೆಯಾಟದ ವಸ್ತು, ಆಟಿಗೆಯ ವಿವಿಧ ಪ್ರಕಾರಗಳನ್ನು ಮಾಡಿ ಜಾತ್ರೆಗಳಲ್ಲಿ ಮಾರಾಟಗೈದ ದೃಷ್ಟಾಂತಗಳುಂಟು. ಇದೇ ಸಮಯದಲ್ಲಿ ರಥಶಿಲ್ಪದ ದಟ್ಟ ಅನುಭವದಿಂದಾಗಿ ಕಮತಗಿ ಶ್ರೀ ಹುಚ್ಚೇಶ್ವರ ಮಠದ ಕಲ್ಲಿನ ದ್ವಾರ ನಿರ್ಮಾಣ ಕಾರ್ಯದ ಸಾಹಸಕ್ಕಿಳಿದು ಅದರಲ್ಲೂ ಸಿದ್ಧಹಸ್ತರಾದರು ಈ ಎಲ್ಲ ಕಾರ್ಯಾನುಭವವು ಶಿಲ್ಪಿ ಗುಂಡಪ್ಪನವರ ಇನ್ನೊಂದು ಮುಖದ

ಸೇವೆಗೆ ಕಾರಣವಾಯಿತು.

ಶಿಲ್ಪಿಯ ಕಲಾಕೌಶಲ್ಯ ಮೆಚ್ಚಿದ ಆಗಿನ ಕಾಂಗ್ರೆಸ್ ಮುಖಂಡರಾಗಿದ್ದ ಹುನಗುಂದದ ಪ್ರಾಣೇಶಾಚಾರ್ಯರ ಔದಾರ್ಯದಿಂದಾಗಿ ಬಿಜಾಪುರದ ಖಾದಿ ಗ್ರಾಮೋದ್ಯೋಗ ಮಂಡಳದಲ್ಲಿ ಸೇವಾ ಅವಕಾಶವೊದಗಿದ್ದರಿಂದ ೧೯೫೦ರಲ್ಲಿ ಶಿಲ್ಪಿ ಗುಂಡಪ್ಪನವರ ಬದುಕು ಜಟಕಾಬಂಡಿ ಇನ್ನೊಂದು ರೂಪ ಪಡೆಯಿತು. ಅಲ್ಲಿಯೂ ಅವರ ಕೆಲಸದ ಶ್ರದ್ಧೆ, ದಕ್ಷತೆಗಳು ಬಹುಜನರಿಗೆ ಮೆಚ್ಚುಗೆಯಾಗಿದ್ದರಿಂದ ಖಾದೀ ನಾಯಕರು ಗುಂಡಪ್ಪನವರನ್ನು ವರ್ಧಾಗಾಂಧೀ ಆಶ್ರಮಕ್ಕೆ ಹೆಚ್ಚಿನ ಸೇವಾ ಅವಕಾಶಕಲ್ಪಿಸಿ ಕಳುಹಿದರು. ಅಲ್ಲಿಯ ಸರಂಜಾಮು ಸಮ್ಮೇಳನದಲ್ಲಿ ಖಾದೀ ಪ್ರದರ್ಶನ ಮಳಿಗೆಯನ್ನು ಕಲಾತ್ಮಕವಾಗಿ ನಿರ್ಮಿಸಿ ಅದರಲ್ಲಿಯೂ ತಮ್ಮ ವಿಶಿಷ್ಟತೆ ಮೆರೆಸಿದರು. ಸಬರಮತಿಯಲ್ಲಿ ನೂತನ ಅಂಬರ ಚರಖಾದ ರಚನೆಗಾಗಿ ಅನುಭವ ಹೊಂದಿ ಕೆಲವು ಕಾಲ ದೇಶಾಟನೆಗೈದು ಖಾದೀ ಗ್ರಾಮೋದ್ಯೋಗ ಪವಿತ್ರಕಾರ್ಯದಲ್ಲಿ ತೊಡಗಿಕೊಂಡರು. ಬಿಜಾಪುರ ಖಾದೀ ಗ್ರಾಮೋದ್ಯೋಗ ಮಂಡಳದಲ್ಲಿ ಇರುವಾಗಲೇ ದಿ. ಕೌಜಲಗಿ ಹಣಮಂತರಾಯ, ರಾವ್ ಬಹಾದ್ದೂರ್ (ಪ್ರಸಿದ್ಧ ಕನ್ನಡ ಕಾದಂಬರಿಕಾರ) ಮಾಜಿ ರಾಷ್ಟ್ರಪತಿ ಶ್ರೀ ಬಿ.ಡಿ. ಜತ್ತಿ ಮುಂತಾದವರು ಶಿಲ್ಪಿ ಗುಂಡಪ್ಪನವರ ಕಲಾನೈಪುಣ್ಯತೆಯನ್ನು ಮೆಚ್ಚಿ ಹೆಚ್ಚಿನ ಪ್ರೋತ್ಸಾಹ ನೀಡಿದರು. ಇದನ್ನು ಕಂಡು ಕರುಬಿದ ಖಾದೀ ಗ್ರಾಮೋದ್ಯೋಗ ಮಂಡಳಿಯ ಪಟ್ಟಭದ್ರ ಶಕ್ತಿಯ ಅಧಿಕಾರಿಗಳು ನೀಡಿದ ಕಿರಕುಳಕ್ಕಾಗಿ ಆ ಕೆಲಸಕ್ಕೂ ಸಹ ರಾಜೀನಾಮೆ ನೀಡಿ ಮತ್ತೆ ಬಾಗಲಕೋಟೆಯತ್ತ ಮರಳಿದರು. ೧೯೬೪ರಲ್ಲಿ ಬಾಗಲಕೋಟೆಯಲ್ಲಿ ಬದುಕುವ ಮಾರ್ಗಕ್ಕಾಗಿ ಪರದಾಡುವ ಸ್ಥಿತಿಯೊದಗಿತು. ಶ್ರೀ ಗೋಲಪ್ಪನವ

ರೆಂಬ ವರ್ತಕರು ಆರ್ಥಿಕ ನೆರವಿತ್ತು ಮನೆ ಖರೀದಿಗೆ ಕಾರಣರಾದರೆ ಶ್ರೀ ಬಿ.ಜೆ. ಹೇಸೆಯೆಂಬವರು ತಮ್ಮ ಟ್ರ್ಯಾಕ್ಟರ್ ಏಜೆನ್ಸಿ ಕಂಪನಿಯಲ್ಲಿ ಕೆಲಸ ನೀಡಿ ಉಪಜೀವನ ಮಾರ್ಗ ಕಲ್ಪಿಸಿದರು. ಅವರು ನೀಡುತ್ತಿದ್ದ ಮಾಸಿಕ ೧೨೦ ರೂಪಾಯಿ ಸಂಬಳದ ಆಸರೆಯು ಮುಳುಗುತ್ತಿದ್ದ ಗುಂಡಪ್ಪನವರ ಸಂಸಾರಕ್ಕೆ ಆಶ್ರಯವಾಯಿತು. ಈ ಅಲ್ಪ ಸಂಬಳದಲ್ಲಿ ಬೆಳೆಯುತ್ತಿರುವ ಅವರ ಕುಟುಂಬದ ಖರ್ಚು ಸಾಲದಾದಾಗ ಮತ್ತೆ ಇವರಿಗೆ ಮಾರ್ಗತೋರಿದ್ದು ಶಿಲ್ಪ ರಚನೆಯ ಉದ್ಯಮವೆ !

ಪ್ರಾರಂಭದ ದಿನಗಳಲ್ಲಿ ಗುಂಡಪ್ಪನವರು ಪುಡಿಗಾಸಿನಗಳಿಕೆಗಾಗಿ ಚಿಕ್ಕ ಪುಟ್ಟ ಕಲಾಕೃತಿಗಳನ್ನು ನಿರ್ಮಿಸಿ ಆದಾಯಪಡೆಯುತ್ತಿದ್ದರೂ ಇವರಿಗೆ ಶಿಲ್ಪಿಯಪಟ್ಟ ಬಂದದ್ದು ಪೂಜ್ಯ ಶ್ರೀ ಬಿಳ್ಕೂರ ಗುರುಬಸವ ಸ್ವಾಮೀಜಿ ಶಿಲ್ಪರಚನೆಯ ನಂತರದಿಂದಲೆ! ಇದೊಂದು ಪವಾಡಸದೃಶ ಕಾರ್ಯವೂ ಕೂಡ. ಕೇವಲ ಇಪ್ಪತ್ತಾರು ದಿನಗಳಲ್ಲಿ ಮೂರಡಿ ಎತ್ತರದ ಸ್ವಾಮೀಜಿಗಳ ವಿಗ್ರಹದಲ್ಲಿ ತಮ್ಮ ಕಲಾನೈಪುಣ್ಯತೆ ಮೆರೆಸಿದ ಗುಂಡಪ್ಪನವರು ಈ ಶಿಲ್ಪದಿಂದಾಗಿ 'ಶಿಲ್ಪಾಚಾರ್ಯ'ರಾಗಿ ಮೆರೆದರು. ಬಸವಣ್ಣನವರ ವಚನ 'ನೀನೊಲಿದರೆ ಕೊರಡು ಕೊನರುವುದಯ್ಯ, ನೀನೊಲಿದರೆ ಬರಡು ಹಯನಹುದಯ್ಯ' ಎಂಬಂತೆ ದೈವದತ್ತ ಶಿಲ್ಪಕಾರ್ಯವು ಗುಂಡಪ್ಪನವರ ಕೈಗಳಿಗೆ ಮಾಂತ್ರಿಕ ಶಕ್ತಿಯನ್ನು ಸಹ ನೀಡಿತು. ಶಿಲ್ಪ ಶಾಸ್ತ್ರದ ಬಗ್ಗೆ ಒಂದಕ್ಷರವನ್ನೂ ಅರಿಯದೆ ಶಿಲ್ಪವೊಂದನ್ನು ಕಲಾತ್ಮಕವಾಗಿ ನಿರ್ಮಿಸಿ ಸಮರ್ಥಶಿಲ್ಪಿಯಾಗಿ ಅರಳಿದರು. ಬದುಕಿನ ಪ್ರಾರಂಭಕಾಲದಿಂದ ಬರೀ ಕಷ್ಟಕಾರ್ಪಣ್ಯಗಳಲ್ಲಿ ತೊಳಲಿದ ಗುಂಡಪ್ಪನವರ ಬದುಕು ಹೊಸ ತಿರುವನ್ನೂ ಪಡೆಯಿತು.

## ಕೃತಿ ನಿರ್ಮಾಣ ಕಾರ್ಯ

ವಾಸ್ತುಶಿಲ್ಪ ಶಾಸ್ತ್ರದ ಬಗೆಗೆ ಯಾರಿಂದಲೂ ಕಲಿಯದ ಗುಂಡಪ್ಪನವರು ಕ್ಲಿಷ್ಟವಾದ ಈ ಶಿಲ್ಪೋದ್ಯಮದಲ್ಲಿ ಮಾಡಿರುವ ಸಾಧನೆ ಪ್ರಯೋಗಗಳ ಬಗೆಗೆ ಅಚ್ಚರಿಯಾಗುತ್ತದೆ. ತಮ್ಮದೇ ಆದ ವಿಶಿಷ್ಟ ರಚನಾತಂತ್ರದಲ್ಲಿ ಸುಂದರ ವಿಗ್ರಹಗಳನ್ನು ನಿರ್ಮಿಸುವಂಥ ಜಾಣ್ಮೆ ಕೆಲವರಿಗೆ ಕುತೂಹಲಪಡಿಸುತ್ತದೆ. ಇವರ ಕಾರ್ಯಕ್ಷೇತ್ರದ ಸುತ್ತು ಮುತ್ತುಲಿರುವ ಐಹೊಳೆ, ಬಾದಾಮಿ, ಪಟ್ಟದಕಲ್ಲುಗಳ ನೂರಾರು ಶಿಲ್ಪಗಳು ಗುಂಡಪ್ಪನವರ ಕಲ್ಪಕ ಶಕ್ತಿಗೆ ಚಾಲನೆ ನೀಡಿವೆ. ಪ್ರಭಾವಮಾಡಿವೆ. ಚಾಲುಕ್ಯ ಶಿಲ್ಪಗಳಲ್ಲಿಯ ಕೆಲವು ವಿಶೇಷತೆಗಳು ಗುಂಡಪ್ಪ ಶಿಲ್ಪಿಯ ಕಲಾಕೃತಿಗಳಲ್ಲಿಯೂ ಮೂಡಿಬಂದಿರುವುದರಿಂದ ಇವರ ಶಿಲ್ಪಗಳು ಹೆಚ್ಚು ಆಕರ್ಷಕವಾಗಿರುತ್ತವೆ. ಮಿಂಚಿನವೇಗದಲ್ಲಿ ಒರಟುಕಲ್ಲಿನಲ್ಲಿ ಮೇಣದಂತೆ ಪ್ರತಿಕೃತಿಯನ್ನು ಈ ಶಿಲ್ಪಿ ಮಾಡುವಾಗಿನ ದೃಶ್ಯವನ್ನು ಕಣ್ಣಾರೆ ಕಾಣುವುದೇ ಒಂದು ಸೊಗಸು. ಇವರ ದೈತ್ಯ ಪ್ರತಿಭೆಯ ಬಗೆಗೆ ಆಶ್ಚರ್ಯವಾಗುವುದು ನೋಡಿದವರಿಗೆ.

ಯಾವುದೇ ಶಿಲ್ಪವಿರಲಿ ಅವುಗಳ ರಚನೆಯಲ್ಲಿನ ಕಲ್ಪನಾವಿಲಾಸವು ಗುಂಡಪ್ಪನವರು ವಿಶಿಷ್ಟತನದಿಂದ ಮೂಡಿಸಿರುವುದರಲ್ಲಿ ಕಂಡು ಬರುವುದು. ಇವರೊಬ್ಬ ಶಿಲ್ಪಿಯಾಗಲು ಪ್ರೇರಣೆ ನೀಡಿದವರಲ್ಲಿ ಬಾಗಲಕೋಟೆ ಸಮೀಪದ ಮುರನಾಳಿನ ಪೂಜ್ಯ ಶ್ರೀ ಅಖಂಡೇಶ್ವರ ಸ್ವಾಮಿಜಿ ಹಾಗೂ ಪೂಜ್ಯ ಶ್ರೀ ಗಂಗಾಧರ ಸ್ವಾಮೀಜಿ ಮಹಾಪುರುಷ ಅವರು. ಇವರಿಬ್ಬರ ಕೃಪಾಶಿರ್ವಾದದ ಬಲದಿಂದ ತಾವಿಂದು ಈ ಮಟ್ಟ ತಲುಪಲು ಸಾಧ್ಯವಾಯಿತೆಂದು ಕೃತಜ್ಞತೆಯಿಂದ ಹೇಳುತ್ತಾರೆ. ಇದೆಲ್ಲಕ್ಕೂ ಮಿಗಿಲಾಗಿ ಕುಲದೇವತೆ ಕಾಳಿಕಾಂಬೆಯಲ್ಲಿಟ್ಟು ಕೊಂಡಿರುವ ಅನನ್ಯ

ಭಕ್ತಿ, ಶ್ರದ್ಧೆಗಳು ಅವರ್ಣನೀಯ. ಯಾವುದೇ ಶಿಲ್ಪ ನಿರ್ಮಾಣಕ್ಕೆ ಮೊದಲು ಈ ತಮ್ಮ ಕಲಾದೇವತೆಗೆ ಅಂತಃಕರುಣ ಪೂಜೆ ಸಲ್ಲಿಸಿಯೇ ಮುಂದಿನ ಕಾರ್ಯಗೈಯುವುದು ವಾಡಿಕೆಯಾಗಿದೆ. ೧೯೬೬ರಿಂದ ಮಯಾಚಾರ್ಯ ಗುಂಡಪ್ಪ ಶಿಲ್ಪಿಯವರಿಂದ ರಚಿತಗೊಂಡ ಶಿಲ್ಪಗಳು ಎರಡೂವರೆ ಸಾವಿರದಷ್ಟು ಸಂಖ್ಯೆಗೆ ಈಗ ತಲುಪಿದೆಯೆಂದರೆ ಈ ಶಿಲ್ಪಿಯ ಅವಿರತ ಶ್ರಮದ ಗುಟ್ಟು ಅರಿಯಲಾರದ್ದು.

ಗುಂಡಪ್ಪ ಶಿಲ್ಪಿಯವರು ಶಿಲ್ಪಗಳನ್ನು ಕಪ್ಪು ಕಲ್ಲಿನಲ್ಲಿ ಮತ್ತು ಅಮೃತ ಶಿಲೆಯಲ್ಲಿ (ಸಂಗಮವರಿಕಲ್ಲು) ರಚಿಸಿರುವುದು ನಮ್ಮ ಗಮನಕ್ಕೆ ಬರುತ್ತದೆ. ತಾನು ಸೃಜಿಸಲಿರುವ ಶಿಲ್ಪಕ್ಕೆ ಸುಂದರರೂಪಕೊಡುವ ಕಲೆಗಾರಿಕೆ ಅಪರೂಪದ ಕೌಶಲ್ಯವೆಂದು ಹೇಳಬಹುದು. ಮನದ ಚಿತ್ತ ಭಿತ್ತಿಯಲ್ಲಿ ರೂಪಿಸಿಕೊಂಡ ವಿಗ್ರಹದ ಚಿತ್ರವನ್ನು ಯಥಾವತ್ತಾಗಿ ಮೊದಲು ಕಚ್ಚಾರೀತಿಯಲ್ಲಿ ಕಲ್ಲಿನಲ್ಲಿ ಭಟ್ಟಿಯಿಳಿಸಿ ನಂತರ ಸೂಕ್ಷ್ಮ ಕೆತ್ತನೆ ಕುಶಲತೆಯಿಂದ ಶಿಲ್ಪಕೃತಿ ರಚಿಸುವ ಈ ಶಿಲ್ಪಿಯ ಜಾಣ್ಮೆ ಕಣ್ಣಾರೆ ಕಾಣುವುದೇ ಒಂದು ಸೊಗಸು.

## ವಿಶಿಷ್ಟ ಕಲೆಗಾರಿಕೆ

ಮಯಾಚಾರ್ಯ ಶಿಲ್ಪಿಯವರಿಂದ ರೂಪಿತಗೊಂಡ ಮೂರ್ತಿಗಳು ವಿಶೇಷ ಆಕರ್ಷಣೆಯಿಂದ ಕೂಡಿರುತ್ತವೆ ಅವರು ರಚಿಸಿದ ವಿಗ್ರಹಗಳಲ್ಲಿ ಶೃಂಗಾರ ವೈಭವ ಇರದೇ ಇದ್ದರೂ ಸಹಜ ಸೌಂದರ್ಯ, ನಗು, ಲಾಸ್ಯಗಳ ಅರಳುವಿಕೆಯು ಕಂಡು ಬರುತ್ತವೆ. ದೇವತಾ ವಿಗ್ರಹಗಳಲ್ಲಿ ಎದ್ದು ಕಾಣುವ ಪ್ರಸನ್ನಭಾವ, ಶರಣ ಹಾಗೂ ಸಂತರ ಪ್ರತಿಮೆಗಳಲ್ಲಿಯ ಪ್ರಶಾಂತ ದೃಷ್ಟಿ, ರಾಜಕಾರಣಿ, ಸಮಾಜಸೇವಕರ ಮೂರ್ತಿಗಳಲ್ಲಿ ವ್ಯಕ್ತಗೊಂಡ ಚಿಂತನಶೀಲತೆ

ಇವೆಲ್ಲ ಅಂಶಗಳು ನೋಡುವವರ ಹೃದಯವನ್ನು ಸಂಪೂರ್ಣವಾಗಿ ಸೆರೆಹಿಡಿಯುತ್ತವೆ. ಇತ್ತೀಚಿನ ದಿನಗಳಲ್ಲಿ ಗುಂಡಪ್ಪ ಶಿಲ್ಪಿ ರಚಿಸಿದ ಶಿಲ್ಪಗಳಿಗೆ ಅತ್ಯಂತ ಹೆಚ್ಚಿನ ಬೇಡಿಕೆಯುಂಟಾಗುತ್ತಿರುವುದು ಈ ಎಲ್ಲ ಕಾರಣಗಳಿಂದಲೆ ಎನ್ನಬಹುದು. ಹಗಲು ರಾತ್ರಿಯೆನ್ನದೇ ಕರ್ಮಯೋಗಿಯಂತೆ ಏಕಾಂತ ದೃಷ್ಟಿಯಲ್ಲಿ ತನ್ನ ಮಕ್ಕಳೊಂದಿಗೆ ಶಿಲ್ಪಕಲಾ ಶಾಲೆಯಲ್ಲಿ ತನ್ಮಯಗೊಂಡು ಕೃತಿ ರಚಿಸುತ್ತಲಿರುವ ಈ ಹಿರಿಯ ಚೇತನದ ಕೈಚಳಕವನ್ನು ನೋಡುವುದೊಂದು ಸೊಗಸು ಎನಿಸುತ್ತದೆ. ಬಂದವರ ಜತೆಗೆ ಯೋಗಕ್ಷೇಮ ವಿಚಾರಿಸುತ್ತ, ಲೋಕಾಭಿರಾಮದ ವಿಷಯ ಚರ್ಚಿಸುತ್ತಲೇ ಮಿಂಚಿನ ವೇಗದಲ್ಲಿ ಉಳಿ-ಸುತ್ತಿಗೆಯೊಂದಿಗೆ ಕಲ್ಲಿನಜತೆಗೆ ಸರಸಕ್ಕಿಳಿಯುತ್ತಾರೆ. ಶಿಲ್ಪದೊಂದಿಗೆ ಮಾತನಾಡುತ್ತಾರೆ. ಚಿತ್ತ ಭಿತ್ತಿಯ ಮೂರ್ತಿಯನ್ನು ಪ್ರತಿಕೃತಿಗಳಿಸಿ ಅದರಲ್ಲಿ ತಮ್ಮ ಸಾರ್ಥಕತ್ಯ ಮೆರೆಸುತ್ತಾರೆ ಈ ಗುಂಡಪ್ಪ ಶಿಲ್ಪಿ.

## ಗಮನಾರ್ಹ ಶಿಲ್ಪಗಳು

ಶಿಲ್ಪಿ ಗುಂಡಪ್ಪ ವಿರಚಿತ ಶಿಲ್ಪಗಳಲ್ಲಿ ಕಾಳಿಕಾ, ಶಾರದಾ, ಮಹಾಲಕ್ಷ್ಮಿ, ಮಾರುತಿ, ಈಶ್ವರ, ಅನ್ನಪೂರ್ಣೆ, ಬಗಳಾಂಬಿಕೆ, ಸಂತೋಷಮಾತಾ, ಗಣೇಶ, ಬ್ರಹ್ಮ, ವೀರಭದ್ರ, ಚಿದಂಬರ ಮೂರ್ತಿಗಳ ವೈವಿಧ್ಯತೆ ಕಾಣಬಹುದು. ಇವುಗಳಲ್ಲಿ ಎಣಿಕೆ ಮೀರಿದ ಶಿಲ್ಪಗಳು ನಿರ್ಮಾಣಗೊಂಡು ಅಲ್ಲಲ್ಲಿ ಪೂಜೆಗೊಳ್ಳುತ್ತಿವೆ. ಈ ಶಿಲ್ಪಿ ರಚಿಸಿದ ಕಲಾತ್ಮಕ ಮೂರ್ತಿಗಳೆಂದರೆ ಶಿವಾಜಿ ಬಗಳಾಂಬಿಕೆ, ನಟರಾಜ, ತಾಯಿಮಗು, ಸಜ್ಜಲ ಗುಡ್ಡದ ಶರಣೆ, ಬಸವೇಶ್ವರ ಮುಂತಾದವು. ಇತ್ತೀಚೆಗಿನ ದಿನಗಳಲ್ಲಿ ಬೃಹತ್ ವಾಸ್ತುಶಿಲ್ಪ ನಿರ್ಮಾಣದತ್ತ ಈ ಶಿಲ್ಪಿಯ ಆಸಕ್ತಿ ವಿಸ್ತೃತಗೊಂಡಿದೆ. ಇವರ

ಕಾರ್ಯಗಳಲ್ಲಿ ಅಧುನಿಕ ಶಿಲ್ಪಗಳ ತರಬೇತಿ ಅನುಭವ ಪಡೆದ ಶಿಲ್ಪಿಯ ಪುತ್ರರ ಸಹಭಾಗಿತ್ವದಲ್ಲಿ ಸುಂದರ ವಾಸ್ತುಶಿಲ್ಪಕೃತಿಗಳೂ ನಿರ್ಮಾಣಗೊಳ್ಳುತ್ತಿವೆ. ಪಂಚಲೋಹ ಶಿಲ್ಪಕಾರ್ಯದಲ್ಲಿ ವಿಶೇಷ ಪರಿಣತಿ ಪಡೆದ ಶಿಲ್ಪಿಯ ಪುತ್ರ ವೀರೇಶ ಈ ಲೋಹ ವಿಗ್ರಹಗಳ ರಚನೆಯಲ್ಲೂ ಅಪೂರ್ವತೆ ಸಾಧಿಸಿದ್ದಾರೆ. ಈ ಕಾರ್ಯದಲ್ಲಿ ಶಿಲ್ಪಿಗುಂಡಪ್ಪನವರ ಸಕ್ರಿಯ ಪಾತ್ರವಿಲ್ಲದಿಲ್ಲ.

## ಪ್ರಭಾವ

ಭುವನ ಶಿಲ್ಪಕಲಾಶಾಲೆಯಲ್ಲಿ ಸಾವಿರಾರು ಶಿಲ್ಪಗಳು ರೂಪುಗೊಂಡಿವೆ. ಒಂದಕ್ಕಿಂತ ಇನ್ನೊಂದು ಭಿನ್ನ ಕಲಾ ಕೌಶಲ್ಯತೆ ಹೊಂದಿದ್ದೆಂಬುದು ನೋಡುವವರ ಮನಸ್ಸಿಗೆ ಹೊಳೆಯುತ್ತದೆ. ಗುಂಡಪ್ಪ ಶಿಲ್ಪಿ ನಿರ್ಮಿತ ವಿಗ್ರಹಗಳಲ್ಲಿ ಆಭರಣ ಬಿಡಿಸುವಲ್ಲಿ, ಚೋಳ ಶಿಲ್ಪ ಶೈಲಿ, ಮೂರ್ತಿಗಳ ದೇಹ ಪರಿಮಾಣದಲ್ಲಿ ಹೊಯ್ಸಳ ಶೈಲಿ, ಮುಖದ ಅಂದ ಚಂದಗಳಲ್ಲಿ ಚಾಳುಕ್ಯಶೈಲಿಯ ಪ್ರಭಾವವಿರುವುದೆಂದು ಭಾವಿಸಲಾಗುತ್ತದೆ. ಸಹಜ ಶಿಲ್ಪ ಪ್ರತಿಕೃತಿ ನಿರ್ಮಾಣದಲ್ಲಿ ಗುಂಡಪ್ಪನವರು ರಚಿಸಿರುವ ಮಹಾತ್ಮ ಗಾಂಧೀಜಿ, ನೆಹರೂ, ಅಂಬೇಡ್ಕರ್, ಸಿದ್ಧಾರೂಢ ಸ್ವಾಮೀಜಿ ಮುಂತಾದ ವಿಗ್ರಹಗಳು ಅಪರೂಪದ ಶಿಲ್ಪಗಳಾಗಿ ಬಹಳಷ್ಟು ಜನರ ಮನ ಸೆಳೆದಿವೆ.

'ಕಾಯಕವೇ ಕೈಲಾಸ'ವೆಂಬ ಬಸವೇಶ್ವರರ ವಚನ ಸೂಕ್ತಿಯಂತೆಯೇ ಬದುಕು ಸಾಗಿಸುತ್ತಿರುವ ಶಿಲ್ಪಿ ಗುಂಡಪ್ಪನವರಲ್ಲಿ ದಿನದ ನಿತ್ಯಕರ್ಮಗಳು ಬೆಳಗಿನ ೬ ಗಂಟೆಯಿಂದಲೇ ಪ್ರಾರಂಭಗೊಳ್ಳುತ್ತವೆ. ಅದು ಕೊನೆಗೊಂಡಾಗ ರಾತ್ರಿ ೧೨ ಗಂಟೆ. ಬಿಡುವಿಲ್ಲದ ಚಟುವಟಿಕೆಯೊಂದಿಗೆ ಈ ಕಾರ್ಯ ನಡೆದುಕೊಂಡು

ಬಂದಿದೆ. ಶಿಲ್ಪ ಶಾಸ್ತ್ರ ಹಾಗೂ ಪ್ರತಿಮಾ ಶಾಸ್ತ್ರಗಳ ಕುರಿತಂತೆ ಹೆಚ್ಚಿನ ಅಭ್ಯಾಸ, ಅಧ್ಯಯನಗಳಿರದೇ ಹೋದರೂ "ಕಣ್ಣು ಮುಚ್ಚಿ ತನ್ನಂತರಂಗದೊಳು ಚಿನ್ಮಯ ಮೂರ್ತಿ ನೋಡುವವ ಜ್ಞಾನಿ" ಎಂಬ ತತ್ವಾದರ್ಶದಲ್ಲಿ ಸಾಗಿರುವ ಮನೋಭಾವದವರಾಗಿದ್ದಾರೆ ಈ ಶಿಲ್ಪಿ. ಇವರಲ್ಲಿ ತಾವು ರಚಿಸಲಿರುವ ಮೂರ್ತಿಯ ಪರಿಕಲ್ಪನೆ, ಆಕಾರ ಕಾಡುಕಲ್ಲಿನಲ್ಲಿ ಗೋಚರಿಸುವುದಂತೆ! ಕೆತ್ತಲಿರುವ ವಿಗ್ರಹದ ಬಾಹ್ಯ ಲಕ್ಷಣಗಳ ಸ್ವರೂಪ ತಮ್ಮ ಒಳಗಣ್ಣಿನಲ್ಲಿ ಮೂಡಿಸಿಕೊಂಡು ಶಿಲ್ಪದ ಪ್ರತಿಕೃತಿಯನ್ನು ಭಟ್ಟಿಯಿಳಿಸುತ್ತಾರಂತೆ! ಇದೆಂಥ ದಿವ್ಯ ತಾಂತ್ರಿಕತೆ ಎಂಬುದು ಯಾರಿಗೂ ಅರಿಯದ್ದು. ಶಿಲ್ಪಿ ರಚಿಸಿದ ಯಾವುದೇ ಶಿಲ್ಪಕೃತಿಗಳು ಅಳತೆ ಮಾಪಕಗಳ ಉಪಯೋಗದಲ್ಲಿ ರಚನೆಗೊಂಡವುಗಳಲ್ಲ. ಈ ದೈವೀಶಕ್ತಿಯು ಒಂದು ಕಾಣದ ಶಕ್ತಿಯಂತೆ ಇಲ್ಲಿ ಕೆಲಸ ಮಾಡುವುದು ಆಶ್ಚರ್ಯಗೊಳಿಸಿದ್ದರೂ ಇದು ಎಲ್ಲರಿಗೂ ಕಾಣುವ ನಿತ್ಯ ಸತ್ಯ ಸಂಗತಿಯಾಗಿದೆ.

## ಅಪರೂಪದ ಮೋಹಕ ಶಿಲ್ಪಗಳು

ಶಿಲ್ಪಿಗುಂಡಪ್ಪನವರಿಂದ ರಚಿತವಾಗಿ ಶಿಲ್ಪಗಳಲ್ಲಿ ಅಪೂರ್ವ ಕಲಾವೈಖರಿ ಮೆರೆಸಿದವುಗಳೆಂದು ಈ ಕೆಳನವುಗಳನ್ನು ಹೆಸರಿಸಬಹುದು.

೧. ಹುನಗುಂದದ ಮುದಿಮಾರುತಿ ದೇವರ ೧೫ ಅಡಿ ಎತ್ತರದ ರಥ

೨. ಸಾಯಿಬಾಬರವರ ೪ ಅಡಿ ಎತ್ತರದ ವಿಜಾಪುರದಲ್ಲಿರುವ ಶಿಲ್ಪ

೩. ಸಜ್ಜಲಗುಡ್ಡ ಶರಣಮ್ಮನವರ ೨ ಅಡಿ ೬ ಇಂಚು ಎತ್ತರದ ವಿಗ್ರಹ

೪. ಹುಬ್ಬಳ್ಳಿ ಶ್ರೀ ಸಿದ್ಧಾರೂಢರ ೩ ಅಡಿ ಎತ್ತರದ ೧೦ ವಿಗ್ರಹಗಳು (ವಿವಿದೆಡೆಯಲ್ಲಿ)

೫. ಸರ್ಪಭೂಷಣ ಶಿವಯೋಗಿಗಳ ೩ ಅಡಿ ಎತ್ತರದ ಶಿಲ್ಪ.

೬. ಇಂಚಲದ ಸ್ವಾಮೀಜಿಗಳ ೩ ಅಡಿ ಎತ್ತರದ ಶಿಲ್ಪ

೭. ದತ್ತಾತ್ರಯ (ಜತ್ತದಲ್ಲಿದೆ) ೨ ಅಡಿ ಎತ್ತರದ ಶಿಲ್ಪ

೮. ವಿವೇಕಾನಂದರ ೪ ಅಡಿ ಎತ್ತರದ ಶಿಲ್ಪ (ವಿಜಾಪುರದಲ್ಲಿದೆ)

೯. ಬಾಲಬಸವೇಶ್ವರ ೭ ಅಡಿ ಎತ್ತರದ ಶಿಲ್ಪ (ಕೂಡಲ ಸಂಗಮದಲ್ಲಿದೆ)

೧೦. ಲಚ್ಯಾಣದ ಸಿದ್ಧಪ್ಪ ಮಹಾರಾಜ ಹಾಗೂ ಯಲ್ಲಾಲಿಂಗ ಮಹಾರಾಜರ ವಿಗ್ರಹ ೪೦ ಕಿಲೋ ಬೆಳ್ಳಿಯಿಂದ ರೂಪುಗೊಂಡಿದೆ.

೧೧. ಜಗಜ್ಯೋತಿ ಬಸವೇಶ್ವರರ ೨ ಅಡಿ ಎತ್ತರವಾದ ವಿಗ್ರಹ ಪಂಚಲೋಹ ನಿರ್ಮಿತ

೧೨. ಮಹಾತ್ಮಾ ಗಾಂಧೀಜಿಯವರ ಲೋಹಶಿಲ್ಪ ೨ ಅಡಿ ಎತ್ತರದಲ್ಲಿ ಸಿಂದಗಿಯಲ್ಲಿದೆ.

೧೩. ಲೀಲಾವತಿ ಮಾಗಡಿಯವರ ೨ ಅಡಿ ಎತ್ತರದ ವಿಗ್ರಹ, ಇವೆಲ್ಲವೂ ವಿಶೇಷತೆ, ಕಲಾ ಕೌಶಲ್ಯ ಮೆರೆಸುವಂಥ ಶಿಲ್ಪಗಳೆನ್ನ ಬಹುದು.

ಎಲೆ ಮರೆಯ ಕಾಯಿಯಂತಿದ್ದ ಶಿಲ್ಪಿ ಗುಂಡಪ್ಪನವರತ್ತ ಸರ್ಕಾರ ಹಾಗೂ ಸಾರ್ವಜನಿಕರ ಹೆಚ್ಚಿನ ಗಮನ ಹರಿದದ್ದು

೧೯೮೬ರಲ್ಲಿ. ಬೆಂಗಳೂರಿನಲ್ಲಿ ಜರುಗಿದ ಸಾರ್ಕ ಸಮ್ಮೇಳನ ಸಂದರ್ಭದಲ್ಲಿ ಶಿಲ್ಪ ಕಲಾ ಕಾರ್ಯಾಗಾರದಲ್ಲಿ ಈ ಶಿಲ್ಪಿ ರಚಿಸಿದ ೨ ಅಡಿ ಆರಿಂಚು ಎತ್ತರದ 'ಕಾಳಿಂಗ ಮರ್ಧನ' ಶಿಲ್ಪವು ಕೇವಲ ಏಳೇ ದಿನಗಳಲ್ಲಿ ರಚನೆಗೊಂಡದ್ದಾಗಿದೆ. ಅದರಲ್ಲಿ ಕಲಾ ಸೌಂದರ್ಯ ಎಲ್ಲರ ಮನಸೆಳೆಯಿತು. ಇವರ ಮಿಂಚಿನ ಕೈಚಳಕನೋಡಿ ಕೆಲವರು ಆಶ್ಚರ್ಯ ಪಟ್ಟರು ಕೂಡ.

## ಶಿಲ್ಪ ಶಾಸ್ತ್ರದತ್ತ ಒಲವು

ತಮ್ಮದೇ ವಿಶಿಷ್ಟ ಕಲಾತಂತ್ರ, ಶಿಲ್ಪನಿರ್ಮಾಣ ಪ್ರಕ್ರಿಯೆಯಲ್ಲಿ ಸಾಗಿದ್ದ ಗುಂಡಪ್ಪ ಶಿಲ್ಪಿಯವರಿಗೆ ಶಿಲ್ಪ ಶಾಸ್ತ್ರದತ್ತ ಒಲವುಂಟಾಗಲು ಒಂದು ಘಟನೆ ಕಾರಣವಾಯಿತು. ೧೯೬೩ರ ಸುಮಾರು ಇವರು ಮುಂಬೈಗೆ ಒಂದು ಶಿಲ್ಪ ಪ್ರತಿಷ್ಠಾಪನೆಗೆ ಹೋಗಿದ್ದ ಸಂದರ್ಭದಲ್ಲಿ ಅಲ್ಲಿ ಹೈದರಾಬಾದಿನ ವಾಸ್ತುಶಿಲ್ಪಿಯವರೊಬ್ಬರು ಭೇಟಿಯಾದರು. ಇವರ ಶಿಲ್ಪದ ಸೊಬಗನ್ನು ಮೆಚ್ಚಿದ ಆ ಕಲಾತಜ್ಞರು ಶಿಲ್ಪಿ ಗುಂಡಪ್ಪನವರಿಗೆ ರಚಿಸಿದ ಶಿಲ್ಪಕುರಿತ ಧ್ಯಾನಶ್ಲೋಕ ಕೇಳಿದರಂತೆ! ಆಗ ಯಾವುದೆ ಶಿಲ್ಪ ಶಾಸ್ತ್ರದ ಬಗೆಗಿನ ವಿಷಯವನ್ನೇ ಅರಿಯದ ಶಿಲ್ಪಿಯವರಿಂದ ಅಲ್ಲಿ ಉತ್ತರ ಕೊಡಲಾಗಲಿಲ್ಲ. ಅಂದಿನಿಂದ ಶಿಲ್ಪಶಾಸ್ತ್ರದ ಬಗೆಗೆ ಆಸಕ್ತಿ ಮೂಡಿಸಿಕೊಂಡ ಗುಂಡಪ್ಪನವರು ತಮ್ಮ ಪುತ್ರ ಮಹಾಬಳೇಶನನ್ನು ಹೈದರಾಬಾದ್‌ದಲ್ಲಿಯ ವಾಸ್ತು ಕಲಾ ಶಾಲೆಗೆ ಶಾಸ್ತ್ರೀಯ ಶಿಲ್ಪಕಲೆಯ ಅಧ್ಯಯನಕ್ಕಾಗಿ ಕಳುಹಿಸಿ ಅದರಲ್ಲಿ ಪರಿಣತನಾಗಿ ಬಂದು ಅಪೂರ್ವ ಶಿಲ್ಪಗಳನ್ನು ನಿರ್ಮಿಸುತ್ತಿರಲೂ ಕಾರಣರಾಗಿದ್ದಾರೆ.

ಶಿಲ್ಪಿ ಗುಂಡಪ್ಪನವರ ಆರು ಜನ ಪುತ್ರರಲ್ಲಿಯೂ ಶಿಲ್ಪೋದ್ಯಮದಲ್ಲಿ ಅದಮ್ಯ ಆಸಕ್ತಿ, ಅಭಿರುಚಿ, ಮೊದಲನೆಯ

ಪುತ್ರ ದೇವೇಂದ್ರ ಡಿಪ್ಲೋಮಾ ಮೆಕ್ಯಾನಿಕಲ್ ಆದರೂ ಶಿಲ್ಪ ನಿರ್ಮಾಣದಲ್ಲಿ ಯಂತ್ರಗಳ ಬಳಕೆ ಮಾಡಿ ಬೃಹತ್ ಮಹಾದ್ವಾರ, ದೇವಾಲಯಶಿಲ್ಪ ರಚನೆಯಲ್ಲಿ ಪರಿಣತನಾಗಿದ್ದಾನೆ. ಎರಡನೆಯ ಪುತ್ರ ಮಹಾಬಳೇಶ ಶಿಲ್ಪಿಸ್ಥಪತಿ ಪದವೀಧರ. ದೇವಾಲಯ ಗೋಪುರ ನಿರ್ಮಾಣದಲ್ಲಿ ಸಿದ್ಧಹಸ್ತ ಜತೆಗೂ ಉತ್ತಮ ಕಲಾಕೌಶಲ್ಯ ಮೆರೆಸುವಂಥ ಶಿಲ್ಪಿ, ಮೂರನೆಯ ಪುತ್ರ ಚಂದ್ರಶೇಖರ್ ಅಟೋಮೊಬೈಲ್ ಅನುಭವ ಶಿಕ್ಷಣ ಹೊಂದಿದ್ದರೂ ತಂದೆಯ ಸಹಾಯಕನಾಗಿ ಶಿಲ್ಪೋದ್ಯಮ ದಲ್ಲಿದ್ದಾನೆ. ಇನ್ನೊಬ್ಬ ಪುತ್ರ ಪ್ರಭಾಕರ. ಬಿ.ಎ. ವರೆಗೆ ಓದಿದ್ದರೂ ಶಿಲ್ಪ ನಿರ್ಮಾಣದಲ್ಲಿಯೇ ವಿಶೇಷ ಆಸಕ್ತಿಯಿಂದಿದ್ದಾನೆ. ಐದನೆಯ ಪುತ್ರ ವೀರೇಶ್ ಅಪೂರ್ವ ವರ್ಣಕಲಾವಿದ ಹಾಗೂ ಶಿಲ್ಪಿ. ಅಧುನಿಕ ಕಲಾಕೃತಿಗಳ ರಚನೆಯಲ್ಲಿ ಹೊಸತನದ ಪ್ರಯೋಗದಲ್ಲಿ ಆಸಕ್ತಿಹೊಂದಿದ ಈ ಯುವಕ, ದಾವಣಗೆರೆ "ಕಾಲೇಜ್ ಆಫ್ ಫೈನ್ ಆರ್ಟ್ಸ್"ನಿಂದ ಪದವೀಧರನಾಗಿ ಬಂದ ನಂತರ ಬೆಂಗಳೂರಿನಲ್ಲಿ ಲೋಹಶಿಲ್ಪ ನಿರ್ಮಾಣದ ವಿಶೇಷ ತರಬೇತಿ ಹಾಗೂ ಶಿಕ್ಷಣ ಪಡೆದುಕೊಂಡು ಈ ಕ್ಷೇತ್ರದಲ್ಲೂ ತನ್ನ ಪ್ರತಿಭೆ, ಕಲಾವಂತಿಕೆ ಮೆರೆಸುತ್ತಿದ್ದಾನೆ. ಕೊನೆಯ ಪುತ್ರ 'ಪುಟ್ಟು' ಸಹಕಲಾವಿದನಾಗಿ ತಂದೆಯ ಶಿಲ್ಪ ಸೃಜನ ಕಾರ್ಯದಲ್ಲಿ ನೆರವಾಗುತ್ತಿದ್ದಾನೆ. ಹೀಗೆ ಶಿಲ್ಪಿಯ ಎಲ್ಲ ಪುತ್ರರೂ ಅವರಿಗೆ ಸಹಾಯಕವಾಗಿರುವುದರಿಂದಲೇ ಅಪಾರ ಸಂಖ್ಯೆಯ ಶಿಲ್ಪ ನಿರ್ಮಾಣ ಸಾಧ್ಯವಾಗಿದೆ ಎಂದರೆ ಅತಿಶಯೋಕ್ತಿಯಲ್ಲ.

## ಶಿಲ್ಪ ಕಲಾಶಾಲೆಯ ಉದಯ

ಶಿಲ್ಪ ಕಾರ್ಯದಲ್ಲಿ ಹಲವಾರು ಜನರು ತೊಡಗಬೇಕು. ಆಸಕ್ತಿಯಿರುವಂಥವರು ಪರಿಣತರಾಗಬೇಕೆಂದು ಆಶಿಸುತ್ತ ಹತ್ತು

ಹಲವು ಹೊಂಗನಸು ಕಂಡ ಗುಂಡಪ್ಪನವರು ೧೯೮೨ರಲ್ಲಿ ಬಾಗಲಕೋಟೆಯ ಆಯಕಟ್ಟಿ ಸ್ಥಳದಲ್ಲಿ "ಭುವನ ಶಿಲ್ಪಕಲಾಶಾಲೆ" ಯನ್ನು ನೂತನವಾಗಿ ಪ್ರಾರಂಭಿಸಿ ಕೆಲವು ಯುವಕರನ್ನು ಪ್ರೋತ್ಸಾಹಿಸಿದರು. ಈ ಕಾರ್ಯಕ್ಕೆ ಚಾಲನೆ ನೀಡಿದವರು ಅಂದಿನ ಬಾಗಲಕೋಟೆಯ ಶಾಸಕರಾದ ಪರಪ್ಪಣ್ಣ ಕಳ್ಳೀಗುಡ್ಡ ಹಾಗೂ ಬಾಗಲಕೋಟೆಯಲ್ಲಿ ಅಸಿಸ್ಟಂಟ್ ಕಮೀಶನರ್ ಶ್ರೀ ಹರೀಶ್‌ಗೌಡರವರು. ಈ ಕಲಾಶಿಕ್ಷಣದ ವಿಚಾರಕ್ಕೆ ಸದಾ ಸ್ಫೂರ್ತಿಯ ಸೆಲೆಯಾಗಿದ್ದವರು ಹುಲಗೂರಿನ ಶ್ರೀ ವೆಂಕಟೇಶ್ವರ ಸ್ವಾಮೀಜಿಯವರು. ಇವರ ಕೃಪಾಶಿರ್ವಾದಬಲವೇ ತಮ್ಮನ್ನಿಂದು ಈ ಗೌರವ ಸನ್ಮಾನ ಪಡೆಯುವಂತಾಗಿದೆಯೆಂದು ಶಿಲ್ಪಿ ವಿನಮ್ರತೆಯಿಂದ ಆಗಾಗ ಹೇಳಿಕೊಳ್ಳುತ್ತಾರೆ. ಶಿಲ್ಪಕಲಾಶಾಲೆಗೆ ಪ್ರಾರಂಭದ ದಿನಗಳಲ್ಲಿ ಕೆಲವೊಂದು ಜನ ಉತ್ಸಾಹದಲ್ಲಿ ಪಾಲ್ಗೊಂಡರೂ ನಂತರದಲ್ಲಿ ಕ್ಲಿಷ್ಟಕರವಾದ ಈ ಉದ್ಯಮದಲ್ಲಿ ತಾಳ್ಮೆ, ಸಾಧನೆಗಳಿಲ್ಲದೇ ವಿದಾಯ ಹೇಳಿದರೆಂದು ತಿಳಿಸುವ ಗುಂಡಪ್ಪನವರು ಕೆಲವು ವಿದ್ಯಾರ್ಥಿಗಳು ಇಲ್ಲಿ ಪಡೆದ ಅನುಭವ ಶಿಕ್ಷಣದಿಂದ ಈಗ ಸ್ವತಂತ್ರ ಉದ್ಯೋಗದಲ್ಲಿದ್ದಾರೆಂದು ಹೇಳುತ್ತಾರೆ. ಇವರೊಂದಿಗೆ ದೈನಂದಿನ ಶಿಲ್ಪ ಕಾರ್ಯದಲ್ಲಿ ಬಿಡುವಿಲ್ಲದೆ ಶ್ರಮಪಟ್ಟಿರುವ ಇವರ ಎಲ್ಲ ಮಕ್ಕಳು, ಮೊಮ್ಮಕ್ಕಳು ಹಾಗೂ ಸೊಸೆಯಂದಿರೂ ಕೂಡ ಶಿಲ್ಪಸೃಜನಕಾರ್ಯದಲ್ಲಿ ತೊಡಗಿಕೊಂಡು ಅದರಲ್ಲಿಯೇ ಸಾರ್ಥಕತೆಯನ್ನು ಪಡೆಯುತ್ತಿದ್ದಾರೆ.

೧೯೯೬ರಲ್ಲಿ ಲೋಹಶಿಲ್ಪರಚನೆಯಲ್ಲಿ ಆಸಕ್ತಿಕೆರಳಿಸಿಕೊಂಡ ಗುಂಡಪ್ಪ ಶಿಲ್ಪಿ, ಅದೇ ತಾನೆ ದಾವಣಗೆರೆ ಫೈನ್ ಆರ್ಟ್ಸ್ ಕಾಲೇಜಿನಿಂದ ಕಲಾಪದವೀಧರನಾಗಿ ಬಂದ ಪುತ್ರ ವೀರೇಶ್‌ನನ್ನು

ಬೆಂಗಳೂರಿನಲ್ಲಿ ಲೋಹಶಿಲ್ಪ ತರಬೇತಿ, ಮಾಹಿತಿ ಪಡೆಯಲು ವ್ಯವಸ್ಥೆಮಾಡಿ ರಾಜ್ಯದ ಮುಖ್ಯಮಂತ್ರಿಗಳಾಗಿದ್ದ ಶ್ರೀ ವೀರಪ್ಪಮೊಯ್ಲಿಯವರಿಂದ ಭುವನ ಲೋಹಶಿಲ್ಪ ಕಾರ್ಯಾಗಾರಕ್ಕೆ ಶಂಕು ಸ್ಥಾಪನೆ ಮಾಡಿಸಿದರು. ೧೯೯೭ರಲ್ಲಿ ರಾಜ್ಯದ ಯುವಜನಸೇವಾ ಹಾಗೂ ಕ್ರೀಡಾ ಇಲಾಖೆ ಸಚಿವರಾಗಿದ್ದ ಶ್ರೀ ಅಜಯಕುಮಾರ ಸರನಾಯಕ ಅವರಿಂದ ಲೋಹಶಿಲ್ಪ ಕಾರ್ಯಾಗಾರವನ್ನು ವಿದ್ಯುಕ್ತವಾಗಿ ಉದ್ಘಾಟಿಸಿದರು. ಈ ಕೇಂದ್ರದಲ್ಲಿ ಈಗಾಗಲೇ ಹಲವಾರು, ಅಪ್ರತಿಮ ಲೋಹದ ವಿಗ್ರಹಗಳು ನಿರ್ಮಾಣಗೊಂಡು ಅತಿಹೆಚ್ಚಿನ ಕಲಾರಸಿಕರ ಮೆಚ್ಚುಗೆ ಪಡೆದಿವೆ. ಆ ನಂತರದಲ್ಲಿ ಬಹುದಿನಗಳ ಇನ್ನೊಂದು ಕನಸಾಗಿದ್ದ ಬೃಹತ್ ವಾಸ್ತು ಶಿಲ್ಪಕಲಾ ಕಾರ್ಯಾಗಾರದತ್ತ ಹೆಚ್ಚಿನ ಆಸಕ್ತಿ ತಾಳಿ ೧೯೯೯ ರ ನವಂಬರ್ ೧೫ ರಂದು "ಶ್ರೀ ಗಂಗಾಧರ ಶಿಲ್ಪಕಲಾ ಕಾರ್ಯಾಗಾರ"ವನ್ನು ಬಾಗಲಕೋಟೆಯ ನೂತನ ಕೈಗಾರಿಕಾ ವಸಾಹತಿನಲ್ಲಿ ಆರಂಭಿಸಿ ಕಾರ್ಯೋನ್ಮುಖರಾಗಿದ್ದಾರೆ. ಇಲ್ಲಿ ಹಿರಿಯ ಪುತ್ರನಾದ ದೇವೇಂದ್ರನು ಯಂತ್ರಗಳ ಸಹಾಯದಿಂದ ದೊಡ್ಡ ಗಾತ್ರದ ವಾಸ್ತು ಕಲೆಗೆ ಸಂಬಂಧಿತ ಶಿಲ್ಪಕಾರ್ಯಕ್ಕೆ ಗರ್ಭಗುಡಿ ದ್ವಾರ ನಿರ್ಮಾಣ, ದೇವಾಲಯ ಶಿಲ್ಪ ತೊಲೆ, ಕಂಭ, ಮಂಟಪ ಮುಂತಾದ ನಿರ್ಮಾಣಗೈಯುತ್ತಿದ್ದಾನೆ. ಈ ಕಾರ್ಯಾಗಾರದಲ್ಲಿ ಕಲ್ಲು ಕೊರೆಯುವ ಯಂತ್ರ, ಶಿಲ್ಪ ಕೆತ್ತುವ ಯಂತ್ರ, ಲೇಥ್‌ಮಶಿನ್, ೪೦ ಕಿಲೊವ್ಯಾಟ್ ಶಕ್ತಿಯ ಜನರೇಟರ್ ಹೀಗೆ ಸುಮಾರು ನಲವತ್ತು ಲಕ್ಷಕ್ಕೂ ಮೀರಿದ ಯಂತ್ರೋಪಕರಣಗಳಿಂದ ಶಿಲ್ಪೋದ್ಯಮದಲ್ಲಿ ತೊಡಗಿದ್ದಾರೆಂಬುದನ್ನು ಗಮನಿಸಲೇಬೇಕು.

## ಜೀವನ ಸಾಧನೆ

ಗುಂಡಪ್ಪ ಶಿಲ್ಪಿಯ ಬದುಕೇ ಒಂದು ರೀತಿಯ ಹೋರಾಟದ್ದೆನ್ನ ಬಹುದು. ಅಬ್ಬರವಿಲ್ಲದ ಹೋರಾಟವಿದು. ಬಾಲ್ಯದ ಆರಂಭ

ಕಾಲದಿಂದಲೇ ಒಂದಿಲ್ಲೊಂದು ಬಗೆಯ ಸಮಸ್ಯೆ, ತೊಂದರೆ, ಕಿರುಕುಳದಲ್ಲಿನೊಂದು, ಬೆಂದು ಫೀನಿಕ್ಸಪಕ್ಷಿಯಂತೆ ಮತ್ತೆ ಗರಿಗೆದರಿ ಹಾರಿ ತನ್ನ ಗುರಿ ತಲುಪಿದ ಈ ಶಿಲ್ಪಿ ಪುಟವಿಟ್ಟ ಚಿನ್ನದಂತೆ! ಬದುಕಿಗಾಗಿ ಪರದಾಡಿ, ಸೆಣಸಾಡಿ ಜತೆಗೆ ಅದೃಷ್ಟದ ಚದುರಂಗದಾಟದಲ್ಲಿ ಒಂದುಕ್ಷಣದ ಪ್ರೇರಣೆಯಿಂದ ಬದುಕಿನ ದೃಷ್ಟಿಕೋನವನ್ನು ಬದಲಿಸಿಕೊಂಡ ಗುಂಡಪ್ಪ ಶಿಲ್ಪಿ ತೀರ ಬಡತನದ ಕಹಿಯುಂಡು ಬೆಳೆದ ವ್ಯಕ್ತಿ. ಸತತ ಪರಿಶ್ರಮ, ಸಾಧನೆ, ಛಲಮಾತ್ರದಿಂದ ತಮ್ಮ ಸಮಗ್ರ ಬದುಕಿನ ಚಿತ್ರವನ್ನೇ ಬದಲಿಸಿಕೊಂಡ ಸ್ವಾಭಿಮಾನ ಹಾಗೂ ಹಠಯೋಗಿ. ಸಾಹಿತ್ಯ, ಸಂಗೀತ ಹಾಗೂ ಇತರ ಲಲಿತಕಲೆಗಳಲ್ಲಿ ಹೆಚ್ಚಿನ ಆಸಕ್ತಿ ಅಭಿರುಚಿಗಳಿರುವ ಗುಂಡಪ್ಪ ಸೂಕ್ತ ವಿಚಾರಗಳಿಗೆ ಸ್ಪಂದಿಸುವಂಥ ಧಾರಾಳ ವ್ಯಕ್ತಿಯೂ ಆಗಿದ್ದಾರೆ. ಬಡತನದ ಕಷ್ಟ ಕಾರ್ಪಣ್ಯಗಳ ಕಹಿಯುಂಡು ಬೆಳೆದ ಈ ಜೀವ, ದಾನ ಧರ್ಮಕಾರ್ಯದಲ್ಲಿಯೂ ಎತ್ತಿದ ಕೈ. ಹಲವಾರು ಜನರಿಗೆ, ಸಂಘ ಸಂಸ್ಥೆಗಳಿಗೆ ಧನಸಹಾಯ ನೀಡಿ ತೃಪ್ತಿ ಪಟ್ಟಿದ್ದಾರೆ ಈ ಶಿಲ್ಪಿ. ಸಾಹಿತ್ಯ ಕೃತಿಗಳ ಪ್ರಕಟನೆಗೆ ಶಿಲ್ಪಿಗುಂಡಪ್ಪನವರು ಆರ್ಥಿಕ ನೆರವಿತ್ತು ಅನೇಕ ಉತ್ತರ ಕರ್ನಾಟಕದ ಬರಹಗಾರನ್ನು ಪ್ರೋತ್ಸಾಹಿಸಿದ್ದಾರೆ. ಅವರಲ್ಲಿ ಖ್ಯಾತ ಸಾಹಿತಿಗಳಾದ ಶ್ರೀ ಜೀವಣ್ಣ ಮಸಳಿ, ಪ್ರೊ. ಸಿದ್ಧರಾಮಯ್ಯ ಮಠ ಪತಿ ಗೋರಟಾ, ಕೋಲಾರದ ಶ್ರೀ ಜಿ. ಜ್ಞಾನಾನಂದ ಹಾಗೂ ಸರೀತಾ ಜ್ಞಾನಾನಂದ, ಮಂಗಳೂರಿನ ವಿರೂಪಾಕ್ಷ ಬಡಿಗೇರ ಮುಂತಾದವರು, ತಮ್ಮ ಹಲವಾರು ಗ್ರಂಥಗಳನ್ನು ಪ್ರಕಾಶನ ಪಡಿಸಿಕೊಂಡವರಾಗಿದ್ದಾರೆ. ಇತ್ತೀಚಿನ ದಿನಗಳಲ್ಲಿ ಕಾರ್ಗಿಲ್ ಯುದ್ಧ ಪ್ರಸಂಗದಲ್ಲಿ ರಕ್ಷಣಾ ನಿಧಿಯಾಗಿ ರಾಷ್ಟ್ರಪ್ರೇಮಿ ಗುಂಡಪ್ಪ ೧೦ ಸಾವಿರ ರೂಪಾಯಿಗಳನ್ನು ದಾನವಾಗಿ ನೀಡಿ ಸದ್ದಿಲ್ಲದೇ ಸಂತೃಪ್ತಿ ಪಟ್ಟಿದ್ದಾರೆ.

ಶಿಕ್ಷಣ ಹಾಗೂ ಸಮಾಜ ಪ್ರೇಮಿಯಾಗಿರುವ ಗುಂಡಪ್ಪ ಶಿಲ್ಪಿಯವರು ತಮ್ಮ ಆರಾಧ್ಯಗುರುಗಳಾಗಿದ್ದ ಹುಲಗೂರು ಜೀವನ್ ಮುಕ್ತಾಲಯ ಕ್ಷೇತ್ರದ ವತಿಯಿಂದ ಪ್ರೌಢಶಾಲೆ ಹಾಗೂ ಶಿಶುವಿಹಾರ ಶಿಕ್ಷಣ ಸಂಸ್ಥೆ ನಡೆಸಲೆಂದು ಲಕ್ಷಾವಧಿ ರೂಪಾಯಿ ವೆಚ್ಚವನ್ನು ದಾನರೂಪವಾಗಿ ಕೊಡಮಾಡಿದ್ದಾರೆ. ಇದೇ ರೀತಿಯ ಸಾಮಾಜಿಕ ಅಭಿವೃದ್ಧಿ ಕಾರ್ಯಗಳಿಗೆ ಮಠ, ಮಾನ್ಯ ಜೀರ್ಣೋದ್ಧಾರ ಕಾರ್ಯ ಮುಂತಾದವುಗಳಿಗೆಂದು ಶಿಲ್ಪಿಯವರ ಈ ದಾನದ ಪಟ್ಟಿ ಬೆಳೆಯುತ್ತಲೇ ಹೋಗುತ್ತದೆ. ಕೊಟ್ಟ ದಾನವನ್ನು ಮರೆತು ಬಿಡುವ ಸ್ವಭಾವದ ಈ ವ್ಯಕ್ತಿ ತಮ್ಮ ಸರಳ ಹಾಗೂ ಸಜ್ಜನ ಸ್ವಭಾವದಿಂದಾಗಿ ಎಲ್ಲರಲ್ಲಿ ಮೆಚ್ಚುಗೆ ಪಡೆದ ಜನಪ್ರಿಯ ವ್ಯಕ್ತಿಯಾಗಿದ್ದಾರೆ.

ನಿಷ್ಠುರದ ಮಾತು, ನಿಸ್ಪೃಹ ಮನಸ್ಸಿನ ಗುಂಡಪ್ಪ ಕಪಟವರಿಯದ ಮುಗ್ಧ ವ್ಯಕ್ತಿಯೂ ಆಗಿದ್ದಾರೆ. ಅವರ ದೇಶೀ ಮಾತುಗಾರಿಕೆಯ ಸೊಗಸನ್ನು ಕೇಳಿಯೇ ಅನುಭವಿಸಬೇಕಷ್ಟೆ! ವ್ಯಂಗ್ಯ, ವಿನೋದ ಪ್ರವೃತ್ತಿಯ ಇವರ ಮೊನಚು ಮಾತು ಘಾಸಿಯೆನಿಸಿದರೂ ನಿಧಾನವಾಗಿ ಆಲೋಚಿಸಿದಾಗ ಅದರಲ್ಲಿ ವ್ಯಕ್ತಿ ವಿಮರ್ಶೆಯ ಪಾಠವೂ ಇರುವುದು. ಬಿಡುವಿನ ವೇಳೆಯಲ್ಲಿ ಬೇಸರಕಳೆಯಲು ಸಂಗೀತ ವಾದ್ಯಗಳ ಮೊರೆಹೋಗುವುದು ಇವರ ಹವ್ಯಾಸ. ಪೀಟೀಲು, ಸಿತಾರವಾದ್ಯಗಳು ಆಗಾಗ ಇವರ ಸಹಾಯಕ್ಕೆ ಬರುತ್ತವೆ. ಮಕ್ಕಳೊಂದಿಗೆ ಒಡನಾಡಿಯಾಗಿ ಸ್ಪಂದಿಸುವ ಈ ಶಿಲ್ಪಿಯ ಬದುಕೇ ಒಂದು ಸುಂದರ ನಂದನವನ. ಇಚ್ಛೆಯೋಳ್‌ನಡೆವ ಸತಿಯೊಂದಿಗಿನ ಈ ಶಿಲ್ಪಿಯ ರಸಮಯ ಬದುಕು ಒಂದು ಭಾವಗೀತೆಯಂತೆ ಸಾಗಿದೆ. ಇಪ್ಪತ್ತೊಂದು ಜನರೊಂದಿಗಿನ ಶಿಲ್ಪಿಗುಂಡಪ್ಪನವರ ಶಿಲ್ಪಪರಿವಾರದ ಗುಟ್ಟು ಎಂದೂ ಅರ್ಥವಾಗದ್ದಾಗಿದೆ.

## ಗೌರವ ಹಾಗೂ ಪ್ರಶಸ್ತಿಗಳು

ಬಾಗಲಕೋಟೆಯ ಭಾಗ್ಯದ ಶಿಲ್ಪಿ ಗುಂಡಪ್ಪ ತುಂಬ ತಡವಾಗಿ ಶಿಲ್ಪಕಾರ್ಯದಲ್ಲಿ ತೊಡಗಿದರೂ ಈ ನಲವತ್ತು ವರ್ಷಗಳಲ್ಲಿ ಆಶ್ಚರ್ಯಕರ ರೀತಿಯಲ್ಲಿ ಸಾವಿರಾರು ಶಿಲ್ಪಗಳಿಗೆ ಜೀವ ತುಂಬಿದ್ದಾರೆ. ಶಿಲ್ಪ ಶಾಸ್ತ್ರಾಧ್ಯಯನ ಕುರಿತು ಹಿನ್ನೆಲೆಯಿಲ್ಲದ ಈ ವ್ಯಕ್ತಿ ತಮ್ಮ ದೈತ್ಯ ಪ್ರತಿಭಾಶಕ್ತಿ, ದೈವಕೃಪೆಮಾತ್ರದಿಂದ ನಾಡಿನ ಶಿಲ್ಪಕಲಾಕ್ಷೇತ್ರಕ್ಕೆ ಅಮೋಘ ಕಾಣಿಕೆ ನೀಡುತ್ತಿರುವುದು ಗಮನಿಸತಕ್ಕ ಸಂಗತಿ. ಗುಂಡಪ್ಪ ಶಿಲ್ಪಿಯ ತೃಪ್ತ ಜೀವನದ ಹಿಂದಿನ ಪ್ರೇರಕ ಶಕ್ತಿಯೆಂದರೆ ಧರ್ಮಪತ್ನಿಯಾಗಿರುವ ಶ್ರೀಮತಿ ಕಾಳಮ್ಮನವರು ಪತಿಯ ನೆರಳಾಗಿ, ದೊಡ್ಡ ಕುಟುಂಬದ ಯಜಮಾನಿಯಾಗಿ ಶಿಲ್ಪಿಯ ಸಫಲ ಬದುಕಿಗೂ ಕಾರಣರಾಗಿದ್ದಾರೆ ಈ ಸಾಧ್ವಿ.

ಶಿಲ್ಪಿ ಮಯಾಚಾರ್ಯ ಗುಂಡಪ್ಪನವರಿಗೆ ಗೌರವ ಪ್ರಶಸ್ತಿ, ಸನ್ಮಾನಗಳು ಸಂದಾಯಗೊಂಡಿವೆ. ಅವರ ಶಿಲ್ಪಕೌಶಲವನ್ನು ಮುಕ್ತವಾಗಿ ಕೊಂಡಾಡಿ ಹಲವಾರು ಸ್ಥಳಗಳಲ್ಲಿ ಗೌರವಿಸಿ ಅಭಿನಂದಿಸಲಾಗಿದೆ. ಅವುಗಳನ್ನು ಹೀಗೆ ಪಟ್ಟಿಮಾಡಬಹುದು.

೧. ಸನ್ ೧೯೭೮ ರಲ್ಲಿ ಕರ್ನಾಟಕ ರಾಜ್ಯ ಕರಕುಶಲ ಮಂಡಳಿಯು ಏರ್ಪಡಿಸಿದ್ದ ಶಿಲ್ಪಕಲಾ ಪ್ರವೀಣರ ಶಿಲ್ಪಸೃಜನ ಸ್ಪರ್ಧೆಯಲ್ಲಿ ಶಿಲ್ಪಿ ಗುಂಡಪ್ಪ ರಚಿಸಿದ 'ರಾಣಾ ಪ್ರತಾಪ ಸಿಂಹ' ಪ್ರತಿಮೆಗೆ ಮೊಟ್ಟಮೊದಲ ಪ್ರಶಸ್ತಿ ಪತ್ರವು ಅಂದಿನ ಮುಖ್ಯ ಮಂತ್ರಿಗಳಾಗಿದ್ದ ಡಿ. ದೇವರಾಜ ಅರಸು ಅವರಿಂದ ರಾಜ್ಯಮಟ್ಟದ ಗೌರವವಾಗಿ ಪ್ರದಾನವಾಗಿದೆ.

೨. ದಿನಾಂಕ ೩.೧೨.೧೯೭೯ ರಲ್ಲಿ ರಾಮದುರ್ಗ ತಾಲೂಕಿನ ಅವರಾದಿಯ ಶ್ರೀ ಫಲಹಾರೇಶ್ವರ ಕ್ಷೇತ್ರದಲ್ಲಿ 'ಶಿಲ್ಪ ಶಿರೋಮಣಿ' ಬಿರುದು ಸಂದಾಯವಾಗಿದೆ.



ಶಿಲ್ಪಿ ಗುಂಡಪ್ಪ ಮಯಾಚಾರ್ಯರ ಪರಿವಾರ



೧೯೮೫ರಲ್ಲಿ ಅರವತ್ತನೆಯ ಹುಟ್ಟು ಹಬ್ಬದ ಕಾರ್ಯಕ್ರಮದಲ್ಲಿ
'ಶಿಲ್ಪಿ' - ಅಭಿನಂದನ ಗ್ರಂಥ ಸಮರ್ಪಣೆ



ಶಿಲ್ಪಿಯ ಶ್ರೀ ಭುವನ ಶಿಲ್ಪಿಕಲಾ ಶಾಲೆಯ ಹೊರನೋಟ



ಶ್ರೀ ಎಂ. ವೀರಪ್ಪ ಮೊಯಿಲಿ ಅವರೊಂದಿಗೆ



ಶಿವಾಜಿ ಹಾಗೂ
ಅಂಬಾಭವಾನಿ



ಕಾರ್ಯಮಗ್ನ

ನಾಗ ಶಿಲ್ಪ





ಗಣೇಶ



ಸರಸ್ವತಿ



ಸಾರ್ಕ್ ಶಿಲ್ಪ ಶಿಬಿರದಲ್ಲಿ





ಅಮೃತ ಶಿಲೆಯ ಶಿಲ್ಪಗಳು



ಐಹೊಳೆಯ ಶಿಲ್ಪಗಳ ವೀಕ್ಷಣೆ



ಸಿತಾರ್ ವಾದ್ಯದೊಂದಿಗೆ

೩. ೧೯೮೦ ರಲ್ಲಿ ಮಹಾರಾಷ್ಟ್ರದ ಈಚಲಕರಂಜಿ ಜೈನ ಪೀಠದ ಪೂಜ್ಯ ಶ್ರೀ ಭಟ್ಟಾರಕ ಸ್ವಾಮಿ ಸನ್ನಿಧಿಯಲ್ಲಿ 'ಶಿಲ್ಪಿ ಗೌರವ' ಲಭಿಸಿದೆ.

೪. ೧೯೮೪ರ ಏಪ್ರಿಲ್ ತಿಂಗಳಲ್ಲಿ ಶ್ರೀ ಕ್ಷೇತ್ರ ಸಿರಶ್ಯಂಗಿ ಕಾಳಿಕಾ ದೇವಿಯ ಯುಗಾದಿ ಮಹೋತ್ಸವದಲ್ಲಿ ಶಿಲ್ಪಿ ಗುಂಡಪ್ಪನವರಿಗೆ ಪ್ರಶಸ್ತಿ ಫಲಕ ನೀಡಿ ಗೌರವಿಸಲಾಗಿದೆ.

೫. ೧೯೮೪ ರಲ್ಲಿ ಮುಂಬಯಿ ಡೋಂಬಿವಲಿ ದುರ್ಗಾದೇವಸ್ಥಾನದಲ್ಲಿ ಶಿಲ್ಪಿಯನ್ನು ಸನ್ಮಾನಿಸಲಾಗಿದೆ.

೬. ೧೯೮೪ರ ಮೇ ೩೧ ರಂದು ಬೆಳಗಾವಿಯ ವಿಶ್ವಕರ್ಮ ವಿದ್ಯಾವರ್ಧಕ ಸಂಘದ ಕಾರ್ಯಕ್ರಮದಲ್ಲಿ ಗೌರವಿಸಿ ಶಿಲ್ಪಸೇವೆ ಕೊಂಡಾಡಲಾಗಿದೆ.

೭. ೧೯.೧೨.೧೯೮೪ ರಂದು ಬಾಗಲಕೋಟೆಯ ಶಿಲ್ಪಿ ಗುಂಡಪ್ಪನವರ ಕಲಾಭಿಮಾನಿ ಬಳಗವು ೬ನೆಯ ವರ್ಧಂತಿ ಸಮಾರಂಭ ಏರ್ಪಡಿಸಿ ಅವರಿಗೆ 'ಶಿಲ್ಪ ಪಾಂಡಿತ್ಯ ಭೂಷಣ' ಪದವಿಯನ್ನಿತ್ತು ಗೌರವಿಸಿತು.

೮. ೧೯೮೬ ರಲ್ಲಿ ಬಾಗಲಕೋಟೆಯ ಸಮಸ್ತ ನಾಗರಿಕರ ಪರವಾಗಿ ಶಿವಾನುಭವ ಕಾರ್ಯಕ್ರಮದಲ್ಲಿ ಇಳಕಲ್ಲಿನ ಪೂಜ್ಯ ಮ.ನಿ.ಪ್ರ.ಸ್ವ ಶ್ರೀ ಮಹಾಂತಸ್ವಾಮಿಜಿಗಳವರ ಸನ್ನಿಧಿಯಲ್ಲಿ ಶಿಲ್ಪಿಗೆ ಅಭಿನಂದನ ಗ್ರಂಥ' ನೀಡಿ ಸನ್ಮಾನಿಸಿ ಗೌರವಿಸಲಾಯಿತು.

೯. ೨೮ರ ಫೆಬ್ರುವರಿ ೧೯೮೬ ರಂದು ಫಂಡರಪುರದ ಸಂತ ನರಹರಿ ಸೋನಾರ ಮಂದಿರದ ವಿಶ್ವಸ್ಥ ಮಂಡಳಿ ಪರವಾಗಿ ಶಿಲ್ಪಿಯವರಿಗೆ 'ಸಮಾಜ ಭೂಷಣ' ಗೌರವ ನೀಡಲಾಗಿದೆ.

೧೦. ಜುಲೈ ೧೧, ೧೯೮೬ರಲ್ಲಿ ನವಲಗುಂದದ ಶ್ರೀ ಅಜಾತನಾಗಲಿಂಗ ಮಹಾ ಸ್ವಾಮಿಗಳವರ ೧೦೪ನೆಯ ಆರಾಧನಾ ಮಹೋತ್ಸವದಲ್ಲಿ ಶಿಲ್ಪಿಗುಂಡಪ್ಪನವರನ್ನು ಪೂಜ್ಯ ಶ್ರೀ ಅಭಿನವ ನಾಗಲಿಂಗ ಸ್ವಾಮೀಜಿಗಳು ಗೌರವಿಸಿ ಸನ್ಮಾನಿಸಿದ್ದಾರೆ.

೧೧. ೧೯೮೬ರಲ್ಲಿ ಬೈಲಹೊಂಗಲದಲ್ಲಿ ಐಹೊಳೆ ಕಾಳಿಕಾ ಪ್ರಕಾಶನದ ಪರವಾಗಿ 'ಕುಶಲ ಶಿಲ್ಪಿ ಗುಂಡಪ್ಪ' ಕೃತಿಯನ್ನರ್ಪಿಸಿ ಅಭಿನಂದಿಸಲಾಯಿತು.

ಆ ನಂತರದಲ್ಲಿ ಶಿಲ್ಪಿಗುಂಡಪ್ಪ ನವರಿಗೆ ಗೌರವ ಪ್ರಶಸ್ತಿಗಳ ಸುರಿಮಳೆಯೇ ಆಯಿತು. ಅವುಗಳಲ್ಲಿ ಮುಖ್ಯವಾದವುಗಳೆಂದರೆ ೧೯೮೮ರಲ್ಲಿ ರಾಜ್ಯದ ಲಲಿತಕಲಾ ಅಕಾಡೆಮಿ ಪ್ರಶಸ್ತಿ, ೧೯೯೧ ರಲ್ಲಿ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಗೌರವ, ೧೯೯೪ರಲ್ಲಿ ಬೆಂಗಳೂರಿನ ಕರ್ನಾಟಕ ನವೋದಯ ಸಂಸ್ಥೆ ಪ್ರತಿವರ್ಷ ಪಟ್ಟದಕಲ್ಲಿನಲ್ಲಿ ಕೊಡಮಾಡುವ 'ತ್ರಿಭುವನಾಚಾರ್ಯ' ಪ್ರಶಸ್ತಿ ಗುಂಡಪ್ಪನವರಿಗೆ ನೀಡಲ್ಪಟ್ಟಿದೆ. ೧೯೯೬ರಲ್ಲಿ ಕರ್ನಾಟಕ ಸರ್ಕಾರವು ಈ ಶಿಲ್ಪಿಯಿಂದ 'ಶಿಲ್ಪ ಕಲಾ ಕ್ಷೇತ್ರಕ್ಕೆ' ಸಂದ ಅಮೋಘ ಸೇವೆಗಾಗಿ ರಾಜ್ಯದ ಉನ್ನತ ಪ್ರಶಸ್ತಿಯಾದ "ಅಮರಶಿಲ್ಪಿ ಜಕಣಾಚಾರಿ ಪ್ರಶಸ್ತಿ" ಗೌರವವು ರಾಜ್ಯದ ಅಂದಿನ ಕನ್ನಡ ಮತ್ತು ಸಂಸ್ಕತಿ ಸಚಿವೆಯಾಗಿದ್ದ ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್ ಅವರಿಂದ ಸಂದಾಯವಾಗಿದೆ. ಆ ಎಲ್ಲ ಗೌರವಕ್ಕೆ ಪಾತ್ರರಾಗಲು ಕಳೆದ ೧೯೮೬ ರಲ್ಲಿ ಬೆಂಗಳೂರಿನಲ್ಲಿ ಜರುಗಿದ ಸಾರ್ಕ ಸಮ್ಮೇಳನ ಸಂದರ್ಭದಲ್ಲಿ ಏರ್ಪಡಿಸಿದ್ದ ಕಲಾಶಿಬಿರದಲ್ಲಿ ಪ್ರದರ್ಶಿತವಾಯಿತು. ಈ ಎಲ್ಲ ಹಿನ್ನೆಲೆಯರಿತ ಸರ್ಕಾರವು ೧೯೯೪ ರಿಂದ ೧೯೯೭ರ ಅವಧಿಗೆಂದು ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಸದಸ್ಯರನ್ನಾಗಿ

ಆಯ್ಕೆಮಾಡಿದ್ದಲ್ಲದೇ ಒಂದು ಅವಧಿಯ ಜಕಣಾಚಾರಿ ಪ್ರಶಸ್ತಿ ಆಯ್ಕೆ ಸಮಿತಿ ಸದಸ್ಯರನ್ನಾಗಿಯೂ ನೇಮಕ ಮಾಡಿತ್ತು.

ಗುಂಡಪ್ಪನವರಿಗೆ ಉತ್ತರ ಕರ್ನಾಟಕ ಮಾತ್ರವಲ್ಲದೇ ಬೆಂಗಳೂರು, ಧಾರವಾಡ, ಬೆಳಗಾವಿ, ಹಾಸನ ಜಿಲ್ಲೆ ಅರೆಮಾದನಹಳ್ಳಿ ಮುಂತಾದ ಅನೇಕ ಸ್ಥಳಗಳಲ್ಲಿ ಗೌರವ ಸನ್ಮಾನ ನೀಡಿ ಶಿಲ್ಪ ಕ್ಷೇತ್ರದ ಸೇವೆಯನ್ನು ಕೊಂಡಾಡಲಾಗಿದೆ. ಕಳೆದ ೧೯೯೯ರಲ್ಲಿ ಡಿಸೆಂಬರ್ ೧೬ ರಂದು ಗುಂಡಪ್ಪನರಿಗೆ ಎಪ್ಪತ್ತೈದನೆಯ ಹುಟ್ಟುಹಬ್ಬದಂದು ಅಮೃತ ಮಹೋತ್ಸವದ ಸವಿನೆನಪಿಗಾಗಿ ರಚಿಸಿದ 'ಮಹಾಶಿಲ್ಪಿ' ಅಭಿನಂದನ ಗ್ರಂಥವು ಶಿಲ್ಪಿಯ ಅಭಿಮಾನಿಗಳಿಂದ ಸಮರ್ಪಿತಗೊಂಡಿದೆಂಬುದನ್ನು ನಾವು ಗಮಿನಿಸಬೇಕು. ಗುಂಡಪ್ಪ ಶಿಲ್ಪಿಯವರ ಅಮೋಘ ಕಲಾಸೇವೆಯನ್ನು ಜನ ಹಾಗೂ ಸರ್ಕಾರಗಳು ತಡವಾಗಿಯಾದರೂ ಗುರುತಿಸಿ, ಮೆಚ್ಚುಗೆ ವ್ಯಕ್ತ ಪಡಿಸಿ ಗೌರವಿಸಿ ಸನ್ಮಾನಗೈದಿವೆ. ಇದರಿಂದ ಕಲಾವಿದನಲ್ಲಿ ಅಡಗಿದ್ದ ಸುಪ್ತ ಕಲಾ ಪ್ರತಿಭೆ ಬೆಳಗಲೂ ಕಾರಣವಾಗಿದೆ. ರಾಜ್ಯಮಟ್ಟದ ಪ್ರಶಸ್ತಿ ಗೌರವಗಳು ತಮಗೆ ಸಂದಾಗ ಶಿಲ್ಪಿ ಗುಂಡಪ್ಪ ಮಯಾಚಾರ್ಯರು ಆಕಾಶವಾಣಿ, ದೂರದರ್ಶನ, ಪತ್ರಿಕೆ ಮುಂತಾದ ಸಮೂಹ ಮಾಧ್ಯಮಗಳ ಮೂಲಕ ತಮ್ಮ ಕಲಾಸೇವೆ ಹಾಗೂ ಬದುಕನ್ನು ಕುರಿತ ಹಲವಾರು ಅವಿಸ್ಮರಣೀಯ ಸಂದರ್ಭಗಳನ್ನು ಮೆಲಕು ಹಾಕಿದ್ದಾರೆ. 'ಬಡತನವು ಬಂಗಾರ, ಕಷ್ಟಗಳು ಆಭರಣವೆಂದು ಭಾವಿಸುವ ಗುಂಡಪ್ಪನವರು' ದೈವಶಕ್ತಿ ಮಾತ್ರದಿಂದಲೇ ತಾವೊಬ್ಬ ಶಿಲ್ಪಿಯಾಗಿ ಅರಳಲು ಸಾಧ್ಯವಾಯ್ತೆಂದು ಆಗಾಗ ಹೇಳುತ್ತಾರೆ. ಈ ಶಿಲ್ಪಿಯ ಕಲಾ ವೈಖರಿ ಜೀವನಾದರ್ಶಗಳ ಕುರಿತು ನಾಡಿನ ಖ್ಯಾತ ದೈನಿಕಗಳಾದ ಕನ್ನಡ ಪ್ರಭ, ಸಂಯುಕ್ತ ಕರ್ನಾಟಕ, ತರಂಗ, ಕರ್ಮವೀರ, ನಾಗರಿಕ ಮುಂತಾದ ಪತ್ರಿಕೆಗಳಲ್ಲಿ

ಚಿತ್ರಲೇಖನಗಳ ಮೂಲಕ ಶಿಲ್ಪಿಯ ನಾನಾ ಶಿಲ್ಪ ಕಲಾ ವೈಭವದ ಪರಿಚಯವಾಗಿದೆ. ಇಷ್ಟು ಹೆಗ್ಗಳಿಕೆ, ಗೌರವಗಳು ಲಭಿಸಿದರೂ ಎಲೆಮರೆಯ ಕಾಯಿಯಂತಿರುವ ಈ ಶಿಲ್ಪಿಯಲ್ಲಿ ತಮ್ಮ ಭಾಗದ ಲೇಖಕರನ್ನು, ಕಲಾ ವಿಮರ್ಶಕರನ್ನು, ಕಲಾವಿದರನ್ನು ಗೌರವಿಸಿ ಆದರಿಸುವ ತವಕ. ಪ್ರತಿ ವರ್ಷವೂ ಶಿಲ್ಪಿ ಗುಂಡಪ್ಪನವರು ತಮ್ಮ ಹುಟ್ಟು ಹಬ್ಬದ ಸಮಾರಂಭದಲ್ಲಿ ಆಯ್ಕೆ ಮಾಡಿದ ಬರಹಗಾರರನ್ನು ಇಲ್ಲವೇ ಕಲಾವಿದರನ್ನು ಆಹ್ವಾನಿಸಿ ಸತ್ಕರಿಸಿ ಸಂತೃಪ್ತಿಪಡುತ್ತಾರೆ. ಈ ಗೌರವಕ್ಕೆ ಪಾತ್ರರಾದವರಲ್ಲಿ ಬಾಗಲಕೋಟೆಯ ಖ್ಯಾತ ಸಾಹಿತಿ ಶ್ರೀ ಜೀವಣ್ಣ ಮಸಳಿ, ಕೆ.ಜಿ.ಎಫ್‌ದ ಪ್ರಸಿದ್ಧ ಲೇಖಕ ಶ್ರೀ ಜಿ. ಜ್ಞಾನಾನಂದ, ನಾಡಿನ ಖ್ಯಾತಶಿಲ್ಪಿ ಹಾಗೂ ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಅಧ್ಯಕ್ಷರಾಗಿದ್ದ ಶ್ರೀ ಕೆ. ಶಾಮರಾಯ ಆಚಾರ್ಯ, ಬೆಂಗಳೂರಿನ ಶಿಲ್ಪಕಲಾ ಅಕಾಡೆಮಿ ರಿಜಿಸ್ಟ್ರಾರ್ ಶ್ರೀ ಎನ್. ಮರಿಶಾಮಾಚಾರ್, ಬಾದಾಮಿಯ ಲೇಖಕ ಹಾಗೂ ಉಪನ್ಯಾಸಕರಾಗಿರುವ ಶ್ರೀ ಶೀಲಾಕಾಂತ ಪತ್ತಾರ, ಬಾಗಲಕೋಟೆಯ ಇನ್ನೊಬ್ಬ ಶಿಲ್ಪಿ ಶ್ರೀ ಭೀಮಪ್ಪ ಮಯಾಚಾರಿ, ಮಂಗಳೂರು ಆಕಾಶವಾಣಿ ಅಧಿಕಾರಿ ಶ್ರೀ ವಿರೂಪಾಕ್ಷ ಬಿ. ಬಡಿಗೇರ ಪ್ರಮುಖರಾಗಿದ್ದಾರೆ. ಈ ಭಾಗದ ಅನೇಕ ಕಲಾವಿದರೂ ಹಾಗೂ ಲೇಖಕರೂ ಶಿಲ್ಪಿಯ ಆಶ್ರಯ, ಪ್ರೋತ್ಸಾಹಗಳಿಂದಾಗಿ ಬೆಳೆದು ಕೀರ್ತಿ ಗೌರವಗಳನ್ನು ಪಡೆದುಕೊಂಡಿದ್ದಾರೆಂಬುದು ಗಮನಿಸತಕ್ಕ ವಿಷಯವಾಗಿದೆ.

## ಶಿಲ್ಪ ವಿಶೇಷತೆಗಳು

ಶಿಲ್ಪಿಗುಂಡಪ್ಪನವರು ತಾವು ಶಿಲ್ಪೋದ್ಯಮದ ಪ್ರಾರಂಭದಿಂದಲೂ ಇದುವರೆಗೆ ನಿರ್ಮಿಸಿದ ಸಮಗ್ರಶಿಲ್ಪಗಳ

ದಾಖಲೆಗಳನ್ನು ಕೆಲವು ಶಿಲ್ಪಗಳ ಛಾಯಾಚಿತ್ರವನ್ನೂ ಕಾಯ್ದಿರಿಸಿ ಕೊಂಡಿದ್ದಾರೆ. ಅವರು ರಚಿಸಿದ ಕಲಾಕೃತಿಗಳಲ್ಲಿ ಕಲಾವಂತಿಕೆ, ವಿನ್ಯಾಸ, ಶಾರೀರಿಕ ತಾಳಮಾನದಲ್ಲಿ ವಿಶಿಷ್ಟತೆಯಿರುತ್ತದೆ. ತಮ್ಮದೇ ಶಿಲ್ಪ ಶೈಲಿಯ ಶುದ್ಧತೆ ಕಾಪಾಡಿಕೊಂಡು ಬಂದಿರುವುದು ನಮ್ಮ ಗಮನಕ್ಕೆ ಬರುತ್ತದೆ. ಚಾಲುಕ್ಯ ವಾಸ್ತು ಶಿಲ್ಪದ ಐಹೊಳೆ, ಬಾದಾಮಿ, ಪಟ್ಟದಕಲ್ಲುಗಳಲ್ಲಿಯ ಮೂರ್ತಿ ಶಿಲ್ಪಗಳಿಂದ ಪ್ರಭಾವಹೊಂದಿದ್ದ ಗುಂಡಪ್ಪ ಶಿಲ್ಪಿ ಆಗಾಗ ಬಿಡುವು ಮಾಡಿಕೊಂಡು ಈ ವಾಸ್ತುಶಿಲ್ಪಗಳ ಕಲಾ ಸೌಂದರ್ಯವನ್ನು ಮನದ ಚಿತ್ತ ಭಿತ್ತಿಯಲ್ಲಿಳಿಸಿಕೊಂಡು ಬಂದು ತಮ್ಮ ಕೃತಿಗಳಲ್ಲಿ ಒಡಮೂಡಿಸುತ್ತಾರೆ.

ಕಳೆದೆರಡು ವರ್ಷಗಳಲ್ಲಿ ಶಿಲ್ಪಿ ಗುಂಡಪ್ಪನವರ 'ಜೀವನ ಹಾಗೂ ಕಲಾಸೇವೆ'ಕುರಿತು ಹಲವಾರು ಪರಿಚಯಾತ್ಮಕ ಕಾರ್ಯಕ್ರಮಗಳನ್ನು ಬೆಂಗಳೂರಿನ ರಾಜ್ಯದ ವಾರ್ತಾ ಮತ್ತು ಪ್ರಚಾರ ಇಲಾ• ವತಿಯಿಂದ ಬೆಂಗಳೂರು ದೂರದರ್ಶನದಲ್ಲಿ 'ಅವಲೋಕನ' ಹಾಗೂ 'ಕರ್ನಾಟಕ ವಾಹಿನಿ'ಯಲ್ಲಿ ಪ್ರಸಾರ ಪಡಿಸಲಾಗಿದೆ. ಹಂಪಿ ಕನ್ನಡ ವಿಶ್ವವಿದ್ಯಾಲಯವೂ ಸಹ ಆಗಾಗ ಈ ಶಿಲ್ಪಿಯ ಸೇವೆ, ಮಾರ್ಗದರ್ಶನಗಳನ್ನು ಬಾದಾಮಿಯಲ್ಲಿ ನಡೆಸುತ್ತಿರುವ 'ಶಿಲ್ಪ ಕಲಾ ಶಾಲೆ'ಯ ವಿದ್ಯಾರ್ಥಿಗಳಿಗೆ ಒದಗಿಸುವ ಪ್ರಯತ್ನವನ್ನೂ ಮಾಡುತ್ತಿದೆ. ನಾಡಿನ ಖ್ಯಾತ ಶಿಲ್ಪಿಗಳು, ಕಲಾವಿದರೊಂದಿಗೆ ನಿಕಟ ಬಾಂಧವ್ಯವು ಈ ಶಿಲ್ಪಿಗುಂಟು. ಅಂಥವರಲ್ಲಿ ಪ್ರಸಿದ್ಧ ಶಿಲ್ಪಿ ಕೆ. ಶಾಮರಾಮ ಆಚಾರ್ಯ, ಇಂದಿನ ಶಿಲ್ಪಕಲಾ ಅಕಾಡೆಮಿ ಅಧ್ಯಕ್ಷ ಶ್ರೀ ಸಿ. ಪರಮೇಶ್ವರಾಚಾರ್, ಧಾರವಾಡದ ಶಿಲ್ಪಿ ಪಂಡಿತ ನಾಗಲಿಂಗಾಚಾರ್ಯ, ದಿ.ಕೆ.ವಿ. ಸೋಮಶೇಖರ ಶಿಲ್ಪಿ, ಗದುಗಿನ ಸೋಮಣ್ಣ ಶಿಲ್ಪಿ ಮುಂತಾದವರನ್ನು ಇಲ್ಲಿ ಹೆಸರಿಸಬಹುದು.

## ಕೃತಿ ವಿಮರ್ಶೆ

ಗುಂಡಪ್ಪ ಶಿಲ್ಪಿ ಸೃಜಿಸಿದ ಶಿಲ್ಪ ಕಾರ್ಯವನ್ನು ಮುಕ್ತವಾಗಿ ಅಲ್ಲಲ್ಲಿ ಶ್ಲಾಘಿಸಲಾಗಿದೆ. ಪಟ್ಟದಕಲ್ಲಿನಲ್ಲಿ ೧೯೯೪ರಲ್ಲಿ ಬೆಂಗಳೂರಿನ ನವೋದಯ ಸಂಸ್ಥೆಯುವರು ಈ ಶಿಲ್ಪಿಗೆ "ಅನಿವಾರಿತಾಚಾರಿ ಗುಣ್ಡ" ಬಾಳಿದ ನೆಲದಲ್ಲಿ ಇವರ ಶಿಲ್ಪಕಲಾ ಸೇವೆಯನ್ನು ಕೊಂಡಾಡಿ 'ತ್ರಿಭುವನಾಚಾರ್ಯ' ಪ್ರಶಸ್ತಿ ನೀಡಿ ಗೌರವಿಸಲಾಗಿದೆ. ಪ್ರಶಸ್ತಿ ಪತ್ರದಲ್ಲಿಯ ಶಾಸನರೂಪಿ ಪಠ್ಯವಿಲ್ಲಿ ಉಲ್ಲೇಖನೀಯವಾಗಿದೆ. ವಿವರಣೆ ಈ ಕೆಳಗಿನಂತಿದೆ.

"ತ್ರಿಭುವನಾಚಾರ್ಯ ಪ್ರಶಸ್ತಿ

ಸ್ವಸ್ತಿಶ್ರೀ ಭುವನ ವಿಖ್ಯಾತಂ ನಿಖಿಳ ಭೂಮಂಡಳ ತಿಳಕಂ ದಕ್ಷಿಣ ಭರತ|
ಶಿರೋಭೂಷಣಂ ಖ್ಯಾತ ಮಹಾ ಪ್ರಭಾವಂ
ಸಕಳಕಳಾವಾಶ್ರಯಮೆನಿಪ್ಪ ಕರ್ಣಾಟದೋಳ್ ಶ್ರೀಮಚ್ಚಾಳುಕ್ಯ
ಸಾಮ್ರಾಜ್ಯಂ, ನಿರುಪಮ ಯಶೋನಿಧಾನಂ ತತ್ಸಾಮ್ರಾಜ್ಯ ಸಂಪದಂ
ಸಂಸ್ಕೃತಿ ವಿಭವಮುಂ ಚಿರಂ ವರ್ಧಿಸುಗೆಂದು
ಚಾಳುಕ್ಯ ಸಾಮ್ರಾಜ್ಯೋತ್ಸವಮಂ ನಿಮಿರ್ಚೆ
ಶ್ರೀಯುತರ್ ವಿನಯೋನ್ನರ್, ಕಳಾ ಪ್ರಪೂರ್ಣರ್
ಶ್ರೀ ಗುಂಡಪ್ಪ ದೇವೆಂದ್ರಪ್ಪ ಮಾಯಾಚಾರ್
ಇವರ್ ತಾಂ ಮೆಱೆದ ವಾಸ್ತು ವಿದ್ಯಾ ಪ್ರಾಢಿಗೆಂದಿತ್ತದೀ
ತ್ರಿಭುವನಾಚಾರ್ಯ ಪ್ರಶಸ್ತಿ
ಮಂಗಳ ಮಹಾಶ್ರೀ
ಶಕ. ೧೯೧೫ ಶ್ರೀಮುಖ ಸಂವತ್ಸರ

ಮಾಘ ಕೃ. ಬಿದಿಗೆ ಭಾನುವಾರ ೧೩.೨.೧೯೯೪ ಪಟ್ಟದಕಲ್ಲು-ಬಾದಾಮಿ"

ಈ ಪ್ರಶಸ್ತಿ ಗುಂಡಪ್ಪನವರ ಸಮಗ್ರ ಶಿಲ್ಪಕಲಾ ಸೇವೆಯ ವಿಮರ್ಶೆಯೆಂದರೂ ತಪ್ಪಲ್ಲ. ರಾಜ್ಯದ ಕರಕುಶಲ ಮಂಡಳಿ, ಲಲಿತಕಲಾ ಅಕಾಡೆಮಿ, ರಾಜ್ಯೋತ್ಸವ ಪ್ರಶಸ್ತಿ ಹಾಗೂ ೧೯೯೯ರಲ್ಲಿ ಉನ್ನತ ಮಟ್ಟದಲ್ಲಿ" ಅಮರಶಿಲ್ಪಿ ಜಕಣಾಚಾರಿ ಪ್ರಶಸ್ತಿ" ಯಲ್ಲಿ ಶಿಲ್ಪಿ ಗುಂಡಪ್ಪನವರು ಶಿಲ್ಪ ಕಲಾ ಕ್ಷೇತ್ರದಲ್ಲಿ ನಡೆಸಿದ ಪ್ರಯೋಗ, ಕಲಾ ವಿಶೇಷತೆಗಳನ್ನು ಮುಕ್ತ ರೀತಿಯಲ್ಲಿ ಬಣ್ಣಿಸಲಾಗಿದೆ. ೧೯೫೩-೫೪ರಲ್ಲಿ ವೃತ್ತಿ ಜೀವನ ಆರಂಭಿಸಿದ ಈ ಶಿಲ್ಪಿ ತಮ್ಮ ಸಹಜ ಕೌಶಲ್ಯ ಇಚ್ಛಾಶಕ್ತಿಯಿಂದ ಸುಪ್ತ ಪ್ರತಿಭೆಯನ್ನು, ಗುರುವಿನ ಮೂಲಕವಾಗಿ ಶಿಲ್ಪಕಲೆಯ ಅಭ್ಯಾಸ ಮಾಡದಿದ್ದರೂ ಈ ವರೆಗಿನ ವಿಗ್ರಹಗಳಲ್ಲಿ ಅಭಿವ್ಯಕ್ತ ಪಡಿಸಿದ್ದನ್ನು ಕೊಂಡಾಡಲಾಗಿದೆ. ಈ ಶಿಲ್ಪಿಯವರು ೧೯೮೨ ರಲ್ಲಿ ಬಾಗಲಕೋಟೆಯಲ್ಲಿ ಭುವನಶಿಲ್ಪಕಲಾಶಾಲೆಯಲ್ಲಿ ನಿರಾತಂಕವಾಗಿ ನಡೆಸುತ್ತಿರುವ ಶಿಲ್ಪಕಲಾ ಸೇವೆಯನ್ನು ಪ್ರಶಸ್ತಿ ಫಲದಲ್ಲಿ ದಾಖಲಿಸುವುದರೊಂದಿಗೆ ಗುಂಡಪ್ಪನವರ ಕಲಾ ವಿಶೇಷತೆ, ವ್ಯಕ್ತಿತ್ವಗಳ ಕುರಿತು ಹೃದಯ ಪೂರ್ವಕವಾಗಿ ಶ್ಲಾಘಿಸಲಾಗಿದೆ. ಸರಳ ಸಜ್ಜನ ವ್ಯಕ್ತಿತ್ವದ ಗುಂಡಪ್ಪ ಶಿಲ್ಪಿಯವರ ಪಾರದರ್ಶಕ ಬದುಕನ್ನು ಎಲ್ಲೆಡೆ ಪಸರಿಸುವಂತೆ, ಮಾಡುವಲ್ಲಿ ಮಾಧ್ಯಮಗಳೂ ಹೆಚ್ಚು ಸಹಾಯ ನೀಡಿವೆ.

## ಕಲಾ ಪ್ರೋತ್ಸಾಹ

ರಾಜ್ಯದಲ್ಲಿ ಅಭಿವೃದ್ಧಿ ಹಾಗೂ ಬೆಳವಣಿಗೆಯ ದೃಷ್ಟಿಯಿಂದ ಹಿಂದೆಂದಿನಿಂದಲೂ ಉತ್ತರ ಕರ್ನಾಟಕವು ಅವಕಾಶ ವಂಚಿತ ಪ್ರದೇಶ. ಈ ಭಾಗದಲ್ಲಿ ಅನೇಕ ಪ್ರತಿಭಾವಂತರಿದ್ದರೂ ಅವರಿಗಿಲ್ಲದ ಪ್ರೋತ್ಸಾಹ ಪ್ರೇರಣೆಗಳಿಂದಾಗಿ ಹೆಚ್ಚು ಬೆಳಕಿಗೆ ಬರುತ್ತಿಲ್ಲ. ಈ ಭಾಗದಲ್ಲಿ ಆಳಿದ ಚಾಲುಕ್ಯರು, ಆದಿಲ ಶಾಹಿ

ಹಾಗೂ ವಿಜಯನಗರ ಅರಸರು ಶಿಲ್ಪಸ್ಮಾರಕಗಳನ್ನು ನಿರ್ಮಿಸಿ ಅಮರರಾಗಿದ್ದರೂ ಯಾವ ರಾಜ ಮಹಾರಾಜರು ಇಲ್ಲಿಯ ಕವಿ ಕಲಾವಿದರನ್ನು ಬೆಳೆಸಲಾರದ್ದು ವಿಷಾದನೀಯ ಸಂಗತಿ. ಇಂಥ ವಾತಾವರಣದಲ್ಲಿ ಬೆಳೆದ ಗುಂಡಪ್ಪ ಶಿಲ್ಪಿಗೂ ಪ್ರಾರಂಭದಿನಗಳಲ್ಲಿ ಯಾವುದೇ ಅಂಥ ಹೇಳಿಕೊಳ್ಳುವಂಥ ರೀತಿಯಲ್ಲಿ ಪ್ರೋತ್ಸಾಹ ಲಭಿಸಲಿಲ್ಲ. ತನ್ನ ಛಲ ಬಿಡದ ಸಾಹಸ ಸಾಧನೆಗಳ ಮಾತ್ರದಿಂದಲೇ ತನಗೆ ತಾನೇ ಗುರುವಾಗಿ ಶಿಲ್ಪಕಲಾ ಕ್ಷೇತ್ರದಲ್ಲಿ ಹುಲುಸಾದ ಕೃಷಿಗೈದ ಗುಂಡಪ್ಪ ಶಿಲ್ಪಿಯ ಸಾಧನೆ ಅಮೋಘವಾದದ್ದೆಂದು ಬೇರೆ ಹೇಳಬೇಕಾಗಿಲ್ಲ. ತಮ್ಮ ಸಂಪ್ರದಾಯ ಬದ್ಧ ಶಿಲ್ಪಕೃತಿ ರಚನೆಯಲ್ಲಿ ವಿಶಿಷ್ಟ ಶೈಲಿಯೊಂದನ್ನು ಬೆಳೆಸಿಕೊಂಡು ಬಂದಿರುವ ಶಿಲ್ಪಿ ಗುಂಡಪ್ಪನವರ ಕೃತಿಗಳದ್ದೇ ಒಂದು ವಿಶೇಷತೆ, ಸೊಗಸು. ಇತ್ತೀಚಿನ ದಿನಗಳಲ್ಲಿ ೧೯೭೦ರ ನಂತರದಲ್ಲಿ ಶಿಲ್ಪಿಯವರ ಕೃತಿಗಳಿಗೆ ಶುಕ್ರದೆಸೆ ಆರಂಭವಾದದ್ದು ದಾಖಲೆಗಳಿಂದ ನಮಗೆ ಮನದಟ್ಟಾಗುತ್ತದೆ. ಹತ್ತು ಹಲವು ಕಲಾ ಸಂಘಟನೆಗಳು, ಅಕಾಡೆಮಿಗಳು ಹಾಗೂ ಸರ್ಕಾರ ತಮ್ಮ ಗಮನವನ್ನು ಶಿಲ್ಪಿ ಗುಂಡಪ್ಪನವರತ್ತ ಹರಿಸಿದ ಮಾತ್ರದಿಂದ ಶಿಲ್ಪಿಯ ಕಲಾ ವೈಖರಿಗೆ ಮತ್ತಷ್ಟು ಬಲವರ್ಧಿಸಿತು. ಇವರ ಕಲಾ ಸಂಪನ್ನತೆ ಮೆಚ್ಚಿದ ಹಲವಾರು ಸಂಘ ಸಂಸ್ಥೆಗಳು ಕಲಾಸೇವೆಯನ್ನು ಕೊಂಡಾಡಿ ಗೌರವಿಸಿದವು. ರಾಜ್ಯಮಟ್ಟದ ಉನ್ನತ ಸಮ್ಮಾನಗಳೂ, ಅವಕಾಶಗಳೂ ಒದಗಿಬಂದವು. ಇಂಥ ಸದವಕಾಶ ಕಲ್ಪಿಸಿದವರಲ್ಲಿ ಉಪರಾಷ್ಟ್ರಪತಿಗಳಾಗಿದ್ದ ಶ್ರೀ ಬಿ.ಡಿ. ಜತ್ತಿ, ರಾಜ್ಯದ ಮುಖ್ಯ ಮಂತ್ರಿಗಳಾಗಿದ್ದ ದೇವರಾಜ ಅರಸು, ಶ್ರೀ ರಾಮಕೃಷ್ಣ ಹೆಗಡೆ, ಶ್ರೀ ವೀರಪ್ಪ ಮೊಯ್ಲಿ, ಶ್ರೀ ಎಸ್. ಬಂಗಾರಪ್ಪ, ದಿ. ಜೆ.ಎಚ್. ಪಟೇಲ್, ಶ್ರೀ ಅಜಯಕುಮಾರ ಸರನಾಯಕ, ಬಾಗಲಕೋಟೆಯ ಶಾಸಕರಾಗಿದ್ದ ಶ್ರೀ ಪಿ. ಕೆ. ಕಳ್ಳಿಗುಡ್ಡ ಈಗಿನ ಶಾಸಕ ಶ್ರೀ ಪೂಜಾರ ಇವರೇ ಮೊದಲಾದವರು

ಶಿಲ್ಪಿ ಗುಂಡಪ್ಪನವರ ಕನಸಿನ ಶಿಲ್ಪಕಲಾ ಶಾಲೆ, ಲೋಹಶಿಲ್ಪಕಲಾ ಕಾರ್ಯಾಗಾರ ಹಾಗೂ ವಾಸ್ತುಕಲಾ ಕಾರ್ಯಾಗಾರಗಳ ಅಭಿವೃದ್ಧಿಗೆ ನೆರವಾಗಿದ್ದಾರೆ. ಶಿಲ್ಪಿಯ ಸುಪ್ತಕಲಾ ಪ್ರೌಢಿಮೆ ಬೆಳೆಯಲು ಕಾರಣರಾದವರಲ್ಲಿ ಇಂದಿನ ಪಂಚಾಯತ್ ರಾಜ್ಯ ಇಲಾಖೆಯ ನಿರ್ದೇಶಕ ಶ್ರೀ ಬಿ.ಎಲ್. ವೇದಮೂರ್ತಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಯುಕ್ತರಾದ ಶ್ರೀ ಎ.ಆರ್. ಚಂದ್ರಹಾಸ ಗುಪ್ತ, ಡಾ. ಚಂದ್ರಶೇಖರ ಕಂಬಾರ. ಖ್ಯಾತ ಕಲಾವಿದರಾಗಿರುವ ಶ್ರೀ ಸಿ. ಪರಮೇಶ್ವರಾಚಾರ್, ಶ್ರೀ ಎನ್. ಮರಿಶಾಮಾಚಾರ್ ಹಾಗೂ ಶ್ರೀ ಆರ್. ಬಿ. ಮಯಾಚಾರ್ಯ ಮುಂತಾದವರನ್ನು ಇಲ್ಲಿ ಹೆಸರಿಸಲೇ ಬೇಕು.

## ಕುಟುಂಬ ವಾತ್ಸಲ್ಯ

ಗುಂಡಪ್ಪ ಮಯಾಚಾರ್ಯರು ತಮ್ಮ ವಯಸ್ಸಿನ ಇಪ್ಪತ್ತೇಳನೆಯ ವರ್ಷದಲ್ಲಿರುವಾಗ ಸೋದರಮಾವ ಸಕರಪ್ಪನವರ ಸುಪುತ್ರಿ ಶ್ರೀಮತಿ ಕಾಳಮ್ಮ ನವರನ್ನು ಕೈ ಹಿಡಿದದ್ದು. ನಂತರದ ಇವರ ಬದುಕಿನ ಚಿತ್ರವೇ ಬದಲಾಯಿತು. ಕಲೆ, ಸಂಗೀತದಲ್ಲಿ ರಸಿಕನಾಗಿದ್ದ ಶಿಲ್ಪಿಯ ಮೈಮನಗಳನ್ನು ತುಂಬಿದ ನಂತರದಲ್ಲಿ ಕೆಲಸದಲ್ಲಿಯ ಉತ್ಸಾಹ ಚಟುವಟಿಕೆಗಳು ಇನಷ್ಟು ಹೆಚ್ಚಿದವು. ಶಿಲ್ಪಿಯ ಸುಂದರ ಬದುಕಿನಲ್ಲಿ ಮೊದಲು ಅರಳಿದ ಪುಷ್ಪ ಪುತ್ರಿ ಲಕ್ಷ್ಮೀಬಾಯಿ. ಅವಳೀಗ ಮದುವೆಯಾಗಿ ೩ ಜನ ಮಕ್ಕಳ ತಾಯಿ. ನಂತರ ಆರು ಜನ ಸುಪುತ್ರರಲ್ಲಿ ಐದುಜನರಿಗೆ ಮದುವೆಯಾಗಿದ್ದು ಮೊಮ್ಮಕ್ಕಳೂ ಆಗಿದ್ದಾರೆ. ಕೊನೆಯ ಪುತ್ರ ಪುಟ್ಟುನಿಗೆ ಇನ್ನೂ ಮದುವೆಯಾಗಬೇಕಿದೆ. ಹಿರಿಯ ಪುತ್ರ ದೇವೇಂದ್ರನಿಗೆ ಸೌ|| ಶೋಭಾ ಅನುರೂಪಳಾದ ಸತಿ. ಇವರ ಇಬ್ಬರು ಸುಪುತ್ರಿಯರಾದ ಕು|| ಶಿಲ್ಪಾ ಹಾಗೂ ಕು||ಶಾರದಾ ಇಬ್ಬರೂ ಶಿಲ್ಪಕಾರ್ಯದಲ್ಲಿ, ಸಂಗೀತದಲ್ಲಿ

ಆಸಕ್ತಿಹೊಂದಿದ್ದಾರೆ. ಒಬ್ಬನೇ ಪುತ್ರ ಗಂಗಾಧರ, ಅಜ್ಜ ಹಾಗೂ ತಂದೆಯ ತರಬೇತಿಯಲ್ಲಿ ಶಿಲ್ಪಿಯಾಗಿ ರೂಪುಗೊಳ್ಳುತ್ತಿದ್ದಾನೆ.

ಇನ್ನೊಬ್ಬ ಪುತ್ರ ಮಹಾಬಳೇಶ ಹಾಗೂ ಸೌ|| ಯಶೋಧರ ಪುತ್ರಿ ಕು|| ಭಾರತಿ ಬಾಲ ನೃತ್ಯಪಟು. ಪುತ್ರ ಮೌನೇಶನೂ ಈಗಾಗಲೇ ಚಿಕ್ಕಪುಟ್ಟ ಶಿಲ್ಪಗಳನ್ನು ರಚಿಸಿದ್ದಾನೆ. ಹೆಸರಿಗೆ ತಕ್ಕಂತೆ ಶಿಲ್ಪಕಲೆ, ಚಿತ್ರಕಲೆಯಲ್ಲಿ ಈಗಾಗಲೇ ಹಲವಾರು ಪ್ರಶಸ್ತಿಗಿಟ್ಟಿಸಿ ಬಹುಮಾನ ಪಡೆದುಕೊಂಡಂಥ ಬಾಲ ಪ್ರತಿಭೆ. ನಾಲ್ಕನೆಯ ಪುತ್ರ ವೀರೇಶ್ ದಾವಣಗೆರೆಯ ಕುಶಲಕಲಾ ಮಹಾವಿದ್ಯಾಲಯದಲ್ಲಿ ಪದವೀಧರನಾಗಿ ಬಂದು ಜಲವರ್ಣ ಹಾಗೂ ಮಾಡೆಲಿಂಗ್ ಕಲೆಯಲ್ಲಿ ಅದ್ಭುತ ಸಾಧನೆಗೈದು ಈಗಾಗಲೇ ನಾಡಿನ ಹಲವಾರು ಸಂಘ ಸಂಸ್ಥೆಗಳ ಬಹುಮಾನಗಳನ್ನು ಪಡೆದುಕೊಂಡಿದ್ದಾನೆ. ಪ್ರತಿಭಾನ್ವಿತ ಶಿಲ್ಪಿಯೂ ಆಗಿರುವ ವೀರೇಶ್‌ನಿಗೆ ೧೯೯೮-೯೯ರಲ್ಲಿ ಸಾಂಪ್ರದಾಯಿಕ ಲೋಹಶಿಲ್ಪದಲ್ಲಿ ಅಸಾಧಾರಣವಾದ ಸೇವೆಗಾಗಿ ರಾಜ್ಯದ ಪ್ರತಿಷ್ಠಿತ ಕಲಾಪ್ರಶಸ್ತಿಯಾದ ಕಮಲಾದೇವಿ ಚಟ್ಟೋಪಾಧ್ಯಾಯ ವಿಶ್ವಕರ್ಮ ಪ್ರಶಸ್ತಿ ಸಂದಾಯಗೊಂಡಿರುವುದು ನಿಜಕ್ಕೂ ಶ್ಲಾಘನೀಯವಾದದ್ದು. ಶಿಲ್ಪಿಗುಂಡಪ್ಪನವರು ಆಸಕ್ತಿಯಿಂದ ಪ್ರಾರಂಭಿಸಿದ ಲೋಹ ಶಿಲ್ಪ ಕಾರ್ಯಾಗಾರವನ್ನು ವೀರೇಶ್ ಮೇಲ್ವಿಚಾರಣೆಗೆ ಬಿಟ್ಟಿದ್ದು ಈಗಾಗಲೇ ಇಲ್ಲಿ ಹಲವಾರು ಸುಂದರ ಲೋಹ ಶಿಲ್ಪಗಳು ನಿರ್ಮಾಣಗೊಂಡು ನಾಡಿನ ಕೆಲವು ಭಾಗದಲ್ಲಿ ಪ್ರತಿಷ್ಠಾಪಿತಗೊಂಡಿವೆ. ಎಲ್ಲ ಮಕ್ಕಳಿಗೂ ಪ್ರೀತಿ ವಾತ್ಸಲ್ಯ ನೀಡಿದ ತಂದೆಯಾಗಿ, ಗುರುವಾಗಿ, ಸ್ನೇಹಿತನಾಗಿ, ಮಾರ್ಗದರ್ಶಕನಾಗಿ ಒಡನಾಡುತ್ತಿರುವ ಶಿಲ್ಪಿಗುಂಡಪ್ಪನವರ ಬದುಕೊಂದು 'ಭಾವಗೀತೆ' ಎಂದೆನಿಸುತ್ತದೆ. ಇಡೀ ಕುಟುಂಬದ ಎಲ್ಲ ಸದಸ್ಯರೊಂದಿಗೆ ಕಲಾಕೃಷಿಯಲ್ಲಿ ತೊಡಗಿಕೊಂಡಿರುವ ಗುಂಡಪ್ಪ

ಶಿಲ್ಪಿ ಮಿತಭಾಷಿ ಜತೆಗೆ ಶೀಘ್ರ ಕೋಪಿಯೂ ಸಹ. ಅವರಾಡಿದ ಮಾತಿಗೆ ತಪ್ಪಿಯಾರೂ ನಡೆಯುವಂತಿಲ್ಲ. ಒಂದೊಂದು ಸಲ ಮನಸ್ಸಿಗೆ ಘಾಸಿ ಪಡಿಸುವಂತೆ ಮಾತನಾಡುವ ಈ ಶಿಲ್ಪಿಯ ಮಾತುಗಳು ಕಿವಿಗೆ ಕೂರ್ದಸಿಯಾಗುತ್ತವೆ. ಅವರ ಮಾತಿಗೆ ತಿದ್ದಿಕೊಂಡು ಸಾಗಿದರೆ ಮೆಚ್ಚುಗೆಯ ಸುರಿಮಳೆಯೂ ಆಗುತ್ತದೆ. ಒಟ್ಟಾರೆ ಕುಟುಂಬ ವತ್ಸಲರಾದ ಈ ಶಿಲ್ಪಿ ಧಾರಾಳಹೃದಯಿ, ಮಮತೆಯ ಕಾರಂಜಿ! ಗುಂಡಪ್ಪ ಶಿಲ್ಪಿ ಸ್ವಭಾವತಃ ಸರಳ ಹಾಗೂ ಸಜ್ಜನ ವ್ಯಕ್ತಿ ಅವರು ಎಲ್ಲಿಯೇ ಹೋಗಲಿ ಯಾರನ್ನೇ ಕಾಣಲಿ ತಮ್ಮ ವಿಶಿಷ್ಟ ದೇಶೀತನದಲ್ಲಿಯೆ ಪರಿಚಯಿಸಿಕೊಳ್ಳುತ್ತಾರೆ. ಡಾಂಬಿಕತನವಿಲ್ಲದ ಶಿಲ್ಪಿ ಗುಂಡಪ್ಪನವರ ಮಾತುಗಳು ಸ್ಪಟಿಕದ ಶಲಾಕೆಯಾಗುತ್ತವೆ. ಮಾಣಿಕ್ಯದ ದೀಪ್ತಿಯಂತೆ ಬೆಳಗುತ್ತವೆ. ದರ್ಪ ದೌಲತ್ತುಗಳಿಗೆ ಸೊಪ್ಪು ಹಾಕದ ಈ ವ್ಯಕ್ತಿ ಒಮ್ಮೊಮ್ಮೆ ತೀರ ನಿಷ್ಠುರ ವ್ಯಕ್ತಿಯಂತೆ ಕಾಣುತ್ತಾರೆ. ಮಕ್ಕಳೊಂದಿಗಿದ್ದಾಗಂತೂ ಗುಂಡಪ್ಪ ಶಿಲ್ಪಿ ಮಕ್ಕಳಂತೆ ಒಡನಾಡುತ್ತಾರೆ. ಅವರ ಬಾಲಿಶ ಮಾತುಗಳು ಪುಟ್ಟ ಮಕ್ಕಳೊಂದಿಗಿನ ಒಡನಾಟ ನೋಡುವ ಕಣ್ಣುಗಳಿಗೆ ಖುಷಿ ನೀಡುತ್ತದೆ.

ಕಳೆದ ಐವತ್ತು ವರ್ಷಗಳಿಂದಲೂ ಬಾಳಗೆಳತಿಯಾಗಿ ಕಷ್ಟಸುಖಗಳಲ್ಲಿ ಪಾಲುಗಾರ್ತಿಯಾಗಿರುವ ಶಿಲ್ಪಿಯವರ ಅರ್ಧಾಂಗಿ ಶ್ರೀಮತಿ ಕಾಳಮ್ಮನವರಲ್ಲಿಯ ಸರಳತೆ, ಸಹನೆಗಳು ವರ್ಣನಾತೀತ. ಪತಿಗೆ ತಕ್ಕ ಸತಿಯಾಗಿ, ಅನವರತ ಬದುಕಿನ ಒಡನಾಡಿಯಾಗಿದ್ದಾರೆ. ಅವರೇ ಗುಂಡಪ್ಪನವರ ಕೀರ್ತಿ, ಪ್ರತಿಷ್ಠೆಗಳಿಗೆ ಮೂಲ ಸ್ಫೂರ್ತಿಯಸೆಲೆ. ಶ್ರೀಮತಿ ಕಾಳಮ್ಮನವರೂ ಹೆಚ್ಚು ಕಲಿತವರೇನಲ್ಲ. ಮಕ್ಕಳನ್ನು ಬೆಳೆಸುವಲ್ಲಿ, ಪರಿವಾರದ ಯೋಗ ಕ್ಷೇಮ ಕಾಪಾಡುವಲ್ಲಿ ಮನೆಗೆ ಬರುಹೋಗುವವರ ಉಪಚಾರದಲ್ಲಿ

ಇರುವ ಆಸಕ್ತಿ ಅಭಿರುಚಿಗಳು ಅನನ್ಯ. ಬೆಳಗಿನ ಐದುಗಂಟೆಗೆ ಎದ್ದರೆ ರಾತ್ರಿ ಮಲಗುವಾಗ ಹನ್ನೆರಡು ಗಂಟೆ ಬಾರಿಸುತ್ತಿದ್ದರೂ ಬೇಸರವಿಲ್ಲದೆ ಗೊಣಗದೇ ಪತಿಯಾಗಿ ನೆರಳಾಗಿ, ಶಿಲ್ಪಿಯ ಬಾಳನ್ನೆಲ್ಲ ಕಾಳಮ್ಮನವರು ನಂದನವನವಾಗಿ ಮಾರ್ಪಡಿಸಿದ್ದಾರೆ. ಬದುಕನ್ನು ಯಶಸ್ವಿಪಡಿಸಿದ್ದಾರೆ.

## ಕೊರಗು, ಆಶೆ ಆಕಾಂಕ್ಷೆಗಳು

ಗುಂಡಪ್ಪ ಶಿಲ್ಪಿಯವರದು ನಿರಾಡಂಬರದ ಬದುಕು. ಅವರದು ಗ್ರಾಮೀಣ ಸಂಸ್ಕೃತಿ ಸಂಪ್ರದಾಯಗಳಲ್ಲಿಯೇ ಹೆಚ್ಚಿನ ಒಲವು ಆಸಕ್ತಿ. ನಗರ ಜೀವನದಲ್ಲಿ ವಾಸವಾಗಿದ್ದರೂ ಆಧುನಿಕತೆಯ ವ್ಯಾಮೋಹವಿಲ್ಲ. ಆರು ಜನ ಪುತ್ರರು, ಐದುಜನ ಸೊಸೆಯಂದಿರು ಹನ್ನೊಂದು ಜನ ಮೊಮ್ಮಕ್ಕಳು ಹಾಗೂ ಒಬ್ಬ ಪುತ್ರಿಯನ್ನು ಹೊಂದಿದ ಬೃಹತ್ ಸಂಸಾರದಲ್ಲಿ ಸುಖ ಸಂತೃಪ್ತಿಯಲ್ಲಿರುವ ಶಿಲ್ಪಿಗುಂಡಪ್ಪನವರಿಗೆ ಇನ್ನು ಹತ್ತು ಹಲವು ಆಶೆ ಆಕಾಂಕ್ಷೆಗಳು ಕಾಡುತ್ತವೆ. ಯುವ ಶಿಲ್ಪಿಗಳಲ್ಲಿ ಹೆಚ್ಚಿನ ಕನಸನ್ನು ಕಾಣುತ್ತಾರೆ. ಅವರು ಕುಸಿಯುತ್ತಿರುವ ಕಲೆ, ಆದರ್ಶಗಳ ಬಗೆಗೆ ಮರುಗುತ್ತಾರೆ. ಪವಿತ್ರ ಕಲಾಕ್ಷೇತ್ರವನ್ನು ವ್ಯಸನಿಗಳು ಮತ್ತು ಚಾರಿತ್ರ್ಯಹೀನ ಕಲಾವಿದರು ಕಲುಷಿತಗೊಳಿಸುವುದರ ಬಗೆಗೆ ತಳಮಳಗೊಳ್ಳುತ್ತಾರೆ. ನಮ್ಮ ಯುವಶಕ್ತಿಯ ವೈಫಲ್ಯಕ್ಕಾಗಿ ಮರುಗುತ್ತಾರೆ. ನಮ್ಮ ಭಾರತೀಯ ಕಲೆ, ಸಂಸ್ಕೃತಿಗಳಿಗೆ ಹೆಚ್ಚಿನ ಮನ್ನಣೆ ದೊರೆಯುವಂತೆ ಶ್ರಮಿಸಲು ಆಶಿಸುತ್ತಾರೆ. ಇದರಿಂದಲೇ ನಮ್ಮ ದೇಶದ ಭವಿಷ್ಯವೂ ಉಜ್ವಲಗೊಳ್ಳುತ್ತದೆ ಎನ್ನುತ್ತಾರೆ ಈ ಶಿಲ್ಪಿ !

ಗುಂಡಪ್ಪ ಮಯಾಚಾರ್ಯರಲ್ಲಿ ಅಸಾಧಾರಣವಾದ ಶಿಲ್ಪಕಲೆ ದೈವದತ್ತವಾಗಿ ಬಂದಿದೆ ಇದರೊಂದಿಗೆ ಅದೃಷ್ಟವೂ ಸಹಕರಿಸಿದೆ.

ಈ ಕಾರಣದಿಂದಲೇ ಅವರು ನಮಗೆ ವರಶಿಲ್ಪಿ ಎನಿಸುತ್ತಾರೆ. ತಮ್ಮ ವಿವಿಧ ಮಾದರಿ ಶಿಲ್ಪಗಳ ಕಲಾ ಗ್ಯಾಲರಿ ಮಾಡುವುದು ಭುವನ ಶಿಲ್ಪಕಲಾ ಶಾಲೆಯಲ್ಲಿ ಕಲ್ಲಿನ ರಥ ನಿರ್ಮಿಸುವುದು, ಭುವನ ವಿಶ್ವಕರ್ಮನ ದೇವಾಲಯ ಕಟ್ಟುವುದು ಇದೇ ಮೊದಲಾದ ಹಲವು ಕನಸುಗಳನ್ನು ನನಸನ್ನಾಗಿ ಮಾಡಿಕೊಳ್ಳಲು ಕಾಯುತ್ತಿದ್ದಾರೆ. ಈ ಹಿರಿಯ ಜೀವದ ಮನದ ತುಮುಲವನ್ನು ಅರ್ಥಮಾಡಿಕೊಂಡು ಸಹಕರಿಸುವಲ್ಲೀಗ ಅವರ ಪುತ್ರರೆಲ್ಲರೂ ನೆರವಾಗಬೇಕಿದೆ. ಅವರಲ್ಲಿಯ ಮೇರು ಕಲಾಶಕ್ತಿಯನ್ನು ಬೆಳಗಿಸಬೇಕಾಗಿದೆ. ಗುರುವಿಲ್ಲದ ಶಿಷ್ಯನೊಬ್ಬನ ಸಾಹಸಗಾಥೆಯನ್ನಿಲ್ಲಿ ಅಮರಗೊಳಿಸಿ ವರಶಿಲ್ಪಿ ಗುಂಡಪ್ಪನವರ ಬದುಕಿಗೆ ಅರ್ಥಮೂಡುವಂಥ ಕಾರ್ಯವು ಯಶಸ್ವಿ ಹೊಂದಬೇಕಾಗಿದೆ. ಅದಕ್ಕಾಗಿ ಕಾಯೋಣವೆ?



## ಆಕರಗಳು


* ವಿರೂಪಾಕ್ಷ ಬಡಿಗೇರ. (ಸಂ) ಶಿಲ್ಪಿ ಅಭಿನಂದನ ಗ್ರಂಥ ಬಾಗಲಕೋಟೆ ೧೯೮೪
* ವಿರೂಪಾಕ್ಷ ಬಡಿಗೇರ 'ಕುಶಲಶಿಲ್ಪಿ ಗುಂಡಪ್ಪ', ಐಹೊಳೆ ೧೯೮೬
* ಚಿದಾನಂದ ಮಯಾಚಾರಿ ಶಿಲೆಯನ್ನು ಹೂವಾಗಿ ಅರಳಿಸಿದ ಗುಂಡಪ್ಪ ಮಯಾಚಾರ್ಯ ೧೯೯೯
* ಎಸ್.ಟಿ. ಪುರಾಣಿಕ ಕೃಷ್ಣಪ್ರಭೇ ಬಾಗಲಕೋಟೆ ೨೦೦೦
* ಶಿಲ್ಪಿ ಗುಂಡಪ್ಪ ಮಯಾಚಾರ್ ಸಂದರ್ಶನ ಆಕಾಶವಾಣಿ ಧಾರವಾಡ ಸಂದರ್ಶಕ ವಿರೂಪಾಕ್ಷ ಬಡಿಗೇರ ೧೯೯೭
* ದೂರದರ್ಶನ ಬೆಂಗಳೂರು ಅವಲೋಕನ ಹಾಗೂ ಕರ್ನಾಟಕ ವಾಹಿನಿ ೧೯೯೯ ಹಾಗೂ ೨೦೦೦
* ಗುಂಡಪ್ಪ ಡಿ. ಮಯಾಚಾರ್ಯ ಶಿಲ್ಪಿ ಆತ್ಮ ಚರಿತ್ರೆ (ಅಪ್ರಕಟಿತ) ೨೦೦೧